ಸರ್ವಮೂಲ ಗ್ರಂಥ ಪ್ರಕಾಶನದ ಸ್ಮಾರಕ ಪ್ರಕಾಶನ

ಸದಾಚಾರವಿನೋದ ಭಾಗ –2

# ಮನುಸುಭಾಷಿತ

(ಮನುಸ್ಮೃತಿಯಲ್ಲಿನ ಧರ್ಮಬೋಧಕ ಸೂಕ್ತಿಗಳ ಸಂಗ್ರಹ)

ಸಂಗ್ರಹ ಮತ್ತು ಅನುವಾದ :

**ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ** ಎಂ.ಎ.ಪಿ.ಹೆಚ್.ಡಿ.

**ಐತರೇಯ ಪ್ರಕಾಶನ ವ್ಯಾಸನಕೆರೆ**

**ಶ್ರೀ ವ್ಯಾಸ ಮಧ್ವ ಸೇವಾಪ್ರತಿಷ್ಠಾನದ ಪ್ರಕಾಶನ ವಿಭಾಗ**

**ಪಾಜಕ, ನಂ 67, ಐವತ್ತಡಿ ರಸ್ತೆ, ಹನುಮಂತನಗರ, ಬೆಂಗಳೂರು-560019**

ಸರ್ವಮೂಲ ಪ್ರಕಾಶನ ಸ್ಮಾರಕ ಪ್ರಕಾಶನ

ಸದಾಚಾರವಿನೋದ-ಭಾಗ-೨

# ಮನುಸುಭಾಷಿತ

(ಮನುಸ್ಮೃತಿಯಲ್ಲಿನ ಧರ್ಮಬೋಧಕ ಸೂಕ್ತಿಗಳ ಸಂಗ್ರಹ)

ಸಂಗ್ರಹ ಮತ್ತು ಅನುವಾದ:

ಡಾ। ವ್ಯಾಸನಕೆರೆ ಪ್ರಭಂಜನಾಚಾರ್ಯ, ಎಂ.ಎ., ಪಿಎಚ್.ಡಿ.

ಪ್ರಕಾಶನ

ಐತರೇಯ ಪ್ರಕಾಶನ ವ್ಯಾಸನಕೆರೆ

ಶ್ರೀ ವ್ಯಾಸ ಮಧ್ವ ಸೇವಾ ಪ್ರತಿಷ್ಠಾನದ ಪ್ರಕಾಶನ ವಿಭಾಗ

ವಾಜಕ, ನಂ 67, 50ಅಡಿ ರಸ್ತೆ, ಹನುಮಂತನಗರ

ಬೆಂಗಳೂರು-560 019

MANUSUBHASHITHA (Sadachara Vinoda-part II)- Compiled and Translated by Vidyavachaspati, Shastrapravachanakesari, Darshanarathnam, Sacchastravichakshanarathnam, Panditharathnam, Mahabharatharathnam, Jnanarathnakara Dr. Vyasanakere Prabhanjanacharya, M.A , Ph.d., Professor and Head of the Department of Sanskrit, Govt Arts College, Bangalore, Published by Aitareya Prakashana Vyasanakere, publication wing of Sri Vyasa Madhwa Seva Pratisthana, Pajaka, No 67, 50' Road, Hanumanth Nagar, Bangalore-560 019 Ph : 6602802

First Edition 1978
Second Revised Edition. 1990
Third Edition 1999

Dr Vyasanakere Prabhanjanacharya, M A., Phd

Price: 25/-

D.T P at
**Sriranga Printers & Binders**
Hanumanthnagar, Bangalore - 19
**Phone : 6679333**

# ಮುನ್ನುಡಿ

''ಸ್ಮೃತಿರಾಜ'' ಎಂದು ಪ್ರಸಿದ್ಧವಾಗಿರುವ 'ಮನುಸ್ಮೃತಿ'ಯಿಂದ ಸಂಗ್ರಹಿಸಿರುವ ಕೆಲವು ಮಹತ್ತ್ವದ ಶ್ಲೋಕಗಳು ಮತ್ತು ಅವುಗಳ ಕನ್ನಡ ಅನುವಾದವನ್ನು ಈ ''ಮನುಸುಭಾಷಿತ'' ಗ್ರಂಥದಲ್ಲಿ ಕಾಣಬಹುದು ಮಾನವನ ಸರ್ವತೋಮುಖವಾದ ಪ್ರಗತಿಗೆ ಮುಖ್ಯಕಾರಣವೆನ್ನಿಸುವ ಅನೇಕ ಮಹತ್ತ್ವದ ಕರ್ತವ್ಯಗಳ ಬಗ್ಗೆ ಮನುವಿನ ಕೆಲವು ಮುಖ್ಯ ವಿಚಾರಗಳು ಇಲ್ಲಿವೆ. ವ್ಯಕ್ತಿ, ದೇಶ, ಕಾಲ, ವಯಸ್ಸು, ವರ್ಣ, ಆಶ್ರಮ, ಲಿಂಗ, ಅಧಿಕಾರ ಮೊದಲಾದುವುಗಳಿಗೆ ಅನುಗುಣವಾಗಿ ವಿಹಿತವಾದ ಮುಖ್ಯ ಕರ್ತವ್ಯಗಳ ಅನುಷ್ಠಾನವು, ಸ್ವಾರ್ಥದ ಹಂಬಲವಿಲ್ಲದೆ ನಡೆದಾಗ, ಜಗತ್ತಿನ ಹಿತಕ್ಕೂ, ಪರಮಾತ್ಮನ ಪ್ರೀತಿಗೂ, ತತ್ತ್ವಜ್ಞಾನದ ಪರಿಶುದ್ಧಿಗೂ ಕಾರಣವಾಗುತ್ತದೆ ಎಂಬ ಭಗವದ್ಗೀತೆಯ ಕರ್ಮಯೋಗವೇ ಮನುವಿನ ಮುಖ್ಯ ಆಶಯವೂ ಆಗಿದೆ (ಗೀತಾ 2/25) ಸ್ವಾರ್ಥದ ಹಿನ್ನೆಲೆಯನ್ನು ಹೊಂದಿರದ ಅಂತಹ ವಿಹಿತ ಕರ್ಮಾನುಷ್ಠಾನವು ಸುದೃಢ ದೇಹ ಮತ್ತು ಸಬಲ ಮನಸ್ಸುಗಳನ್ನು ರೂಪಿಸಲು ಸಹ ನೆರವಾಗುತ್ತದೆ ವಿಚಾರಶುದ್ಧಿಯು ಸದಾಚಾರದಿಂದ ದೊರೆಯುವ ಅತಿಮುಖ್ಯ ಪ್ರಯೋಜನ ವಿಚಾರವನ್ನು ಗಳಿಸಲು ಮಾತ್ರವಲ್ಲದೆ ಗಳಿಸಿದ ವಿಚಾರವನ್ನು ಬೆಳೆಸಲು ಸಹ ಆಚಾರವು ಕಾರಣವಾಗುತ್ತದೆ ಅಂತಹ ನಿರ್ಮಲಜ್ಞಾನವು ಮಾನವನ ಆತ್ಯಂತಿಕಸುಖಕ್ಕೆ ಅತಿಮುಖ್ಯವಾದ ಸಾಧನ ಇಂತಹ ಸದಾಚಾರವನ್ನು ಸಂಗ್ರಹಿಸಿಕೊಡುವಲ್ಲಿ ಮನುಸ್ಮೃತಿ* ಯು ಹೊಂದಿರುವ ಮಹತ್ತ್ವ ಅಪಾರವಾದುದು, ಪೂರ್ವಗ್ರಹ, ಅಂಧಶ್ರದ್ಧೆ ಮತ್ತು ಅಶ್ರದ್ಧೆಗಳನ್ನು ಹೊಂದಿರದ ಯಾರೂ ಮನುಸ್ಮೃತಿಯ ವಿಚಾರಗಳಿಂದ ಪ್ರಯೋಜನ ಪಡೆಯಬಹುದು

---

*ಇದರಲ್ಲಿ ಬರುವ ಬ್ರಾಹ್ಮಣ, ಶೂದ್ರ ಮೊದಲಾದ ಶಬ್ದಗಳಿಗೆ ಪ್ರಚಲಿತ ಅರ್ಥಮಾತ್ರವಲ್ಲದೆ, ಗುಣನಿಮಿತ್ತಿಕವಾದ ಸ್ವರೂಪವರ್ಣಪರವಾದ ಮತ್ತೊಂದು ಅರ್ಥವೂ ಶಾಸ್ತ್ರಪರಿಭಾಷೆಯಲ್ಲಿ ಉಂಟು ಆದ್ದರಿಂದ ಅಂತಹ ಶ್ಲೋಕ ಮತ್ತು ಅನುವಾದಗಳನ್ನು ಬಹಳ ಎಚ್ಚರಿಕೆಯಿಂದ ಅರ್ಥಮಾಡಿಕೊಳ್ಳಬೇಕು

ಪರಮಶ್ರೇಯಸ್ಸಿಗೆ ಮುಖ್ಯಸಾಧನವಾದ ನಿರ್ಮಲತತ್ತ್ವಜ್ಞಾನವು ಪರಿಶುದ್ಧ ಆಚಾರದಿಂದ ಮಾತ್ರವೇ ಸಾಧ್ಯ ಎಂಬ ಮನುವಿನ ದರ್ಶನದಲ್ಲಿ ಮಾನವನ ಆಧ್ಯಾತ್ಮಿಕ ಸಾಧನೆಯಲ್ಲಿ ಆಚಾರ ಮತ್ತು ವಿಚಾರಗಳಿಗಿರುವ ಸಂಬಂಧ, ಸ್ಥಾನ ಮತ್ತು ಸಮನ್ವಯಗಳು ಬಹಳ ಸುಂದರವಾಗಿ ನಿರೂಪಿಸಲ್ಪಟ್ಟಿವೆ

ಇತರ ಗ್ರಂಥಗಳನ್ನು ವಿಮರ್ಶಿಸುವಲ್ಲಿ ಆಧುನಿಕ ವಿಮರ್ಶಕರಲ್ಲಿ ಕಂಡುಬರುವ ಪ್ರಾಮಾಣಿಕತೆ ಮತ್ತು ಸಹೃದಯತೆಗಳು ಪ್ರಾಚೀನ ಮುಖ್ಯ ಸಂಸ್ಕೃತ ಗ್ರಂಥಗಳ ಅಧ್ಯಯನ, ವಿಮರ್ಶೆಗಳ ವಿಷಯದಲ್ಲಿ ಅದೇ ಮಟ್ಟದಲ್ಲಿ ಕಂಡುಬರುತ್ತಿಲ್ಲ ಪ್ರಾಚೀನ ಸಂಸ್ಕೃತಿಯನ್ನು ಹಳಿಯುವದಷ್ಟೇ ವೈಜ್ಞಾನಿಕ ದೃಷ್ಟಿಕೋಣದ ಮುಖ್ಯ ಲಕ್ಷಣವೆಂಬ ತಪ್ಪು ಕಲ್ಪನೆ, ಈಗ ಪ್ರಚಾರದಲ್ಲಿರುವ ದೂಷಿತ ಆಚಾರಗಳೂ ಕೂಡ ವೇದ ಮತ್ತು ಮನುಗಳ ಕಟ್ಟಳೆಗಳು ಎಂಬ ಮಿಥ್ಯಾಜ್ಞಾನ, ಪೂರ್ವಾಪರಗಳನ್ನೇನೂ ವಿವೇಚಿಸದೆ ಶಾಸ್ತ್ರಗಳ ಒಂದು ಮಾತನ್ನೋ, ಒಂದು ವ್ಯಕ್ತಿಯನ್ನೋ ಅಪಹಾಸ್ಯ ಮಾಡುವ ವಿಚಿತ್ರ ಪ್ರವೃತ್ತಿ ಮೊದಲಾದ ಅನೇಕ ಕಾರಣಗಳಿಂದಾಗಿ ಪ್ರಾಚೀನ ಗ್ರಂಥಗಳ ಅಧ್ಯಯನವು ಇಂದು ತೃಪ್ತಿಕರ ಮಟ್ಟದಲ್ಲಿ ನಡೆಯುತ್ತಿಲ್ಲ ಇದರಿಂದ ಸಹಸ್ರಾರು ಋಷಿಮುನಿಗಳ ದರ್ಶನದ ಹಿನ್ನೆಲೆಯಲ್ಲಿ ಅಭಿವ್ಯಕ್ತವಾದ ಸನಾತನ ಸಂಸ್ಕೃತಿಯಿಂದ ಆಸಕ್ತಜನ ವಂಚಿತರಾಗುವ ಅಪಾಯವಿದೆ. ಅವಿಚಾರ ಮೂಲವಾದ ಆಚಾರ ವಿಚಾರಗಳು ಹೆಚ್ಚುವ ಆತಂಕವೂ ಇದೆ ವರ್ಣಶೋಷಣೆ, ಸ್ತ್ರೀಶೋಷಣೆಗಳಿಗೂ, ಬ್ರಾಹ್ಮಣರ ಪುರೋಹಿತ ಶಾಹಿ ಪ್ರವೃತ್ತಿಗೂ ಮನುಸ್ಮೃತಿ ಕಾರಣವಾಗಿದೆ ಎಂಬ ಆಧುನಿಕರ ಆರೋಪದಲ್ಲಿ ತಥ್ಯಾಂಶವಿಲ್ಲ ಮಾತ್ರವಲ್ಲದೆ ದೌರ್ಬಲ್ಯ, ದಾರಿದ್ರ್ಯ, ವರ್ಣ, ಲಿಂಗ ಮೊದಲಾದ ಯಾವ ಹಿನ್ನೆಲೆಯಲ್ಲೂ ಶೋಷಣೆಯನ್ನು ಮನುವು ಒಪ್ಪುವುದಿಲ್ಲ. ಮನುವು ಯಾವುದೇ ಧರ್ಮವನ್ನು ನಿರೂಪಿಸುವಾಗಲೂ, ಅತಿರೇಕ ಮತ್ತು ಶೋಷಣೆಗೆ ಅವಕಾಶ ದೊರೆಯದಂತೆ ಎಚ್ಚರವನ್ನೂ ವಹಿಸುತ್ತಾನೆ. ಈ ಎಲ್ಲ ಅಂಶಗಳನ್ನೂ ಪ್ರಸ್ತುತ ಸಂಗ್ರಹದಲ್ಲಿನ ಶ್ಲೋಕಗಳ ಮನನದಿಂದ ಮನಗಾಣಬಹುದು

ಪ್ರಕೃತ ಗ್ರಂಥದಲ್ಲಿ, ಅತ್ಯವಶ್ಯವೆನ್ನಿಸುವ ಧರ್ಮಗಳ ಆಚರಣೆಗೆ ಹಿನ್ನೆಲೆಯಾಗಿರುವ ಮೂಲಭೂತ ವಿಚಾರಗಳ ಸಂಗ್ರಹಣೆಗೆ ಆದ್ಯತೆ ಕೊಡಲಾಗಿದ ಆಚರಣೆಗೆ ಸಂಬಂಧಿಸಿದ ವಿಧಿವಿಧಾನಗಳನ್ನು ವಿವರಿಸುವುದು ಇಲ್ಲಿಯ ಉದ್ದೇಶವಾಗಿಲ್ಲ ವರ್ಣಾಶ್ರಮಧರ್ಮಗಳಷ್ಟೇ ಮುಖ್ಯವಾಗಿ ಅಹಿಂಸೆ, ಸತ್ಯನಿಷ್ಠೆ, ಪರೋಪಕಾರ,

ನೈರ್ಮಲ್ಯ, ಇಂದ್ರಿಯನಿಗ್ರಹ ಮೊದಲಾದ ಮನುಷ್ಯ ಧರ್ಮಗಳು ಸಹ ಎಲ್ಲರಿಂದಲೂ ಅವಶ್ಯವಾಗಿ ಅನುಷ್ಠಿಸಲ್ಪಡಬೇಕು ಎಂಬ ಮನುವಿನ ಮೂಲ ಆಶಯವು ಇತ್ತೀಚಿನ ದಿನಗಳಲ್ಲಿ ಅಷ್ಟಾಗಿ ಆಚರಣೆಯಲ್ಲಿ ಬಂದಿಲ್ಲ ಅದಕ್ಕಾಗಿ ಅಂತಹ ಮುಖ್ಯ ಧರ್ಮಗಳ ಬಗ್ಗೆ ಗಮನ ಸೆಳೆಯುವ ಶ್ಲೋಕಗಳನ್ನು ಇಲ್ಲಿ ಸ್ವಲ್ಪ ಹೆಚ್ಚು ಸಂಖ್ಯೆಯಲ್ಲಿಯೇ ಸಂಗ್ರಹಿಸಲಾಗಿದೆ ಇಲ್ಲಿ ಬಂದಿರುವುದು ಮುಖ್ಯ ಧರ್ಮಗಳ ಬಗ್ಗೆ ರೂಪರೇಖೆಗಳು ಮಾತ್ರ ಇವೆಲ್ಲವುಗಳ ಬಗೆಗಿನ ಹೆಚ್ಚಿನ ವಿವರಣೆಗಳನ್ನು ಮನುಸ್ಮೃತಿಯ ಸಮಗ್ರ ಅಧ್ಯಯನದಿಂದ ಪಡೆದುಕೊಳ್ಳಬಹುದು ಶ್ಲೋಕಗಳನ್ನು ವಿಷಯ ನಿರೂಪಣೆಗೆ ಅನುಗುಣವಾಗುವಂತೆ ಸಂಗ್ರಹಿಸಲಾಗಿದ್ದು, ಪ್ರತಿ ಶ್ಲೋಕದ ಮುಂದೆ ಮೂಲದ ಅಧ್ಯಾಯ ಮತ್ತು ಶ್ಲೋಕ ಸಂಖ್ಯೆಯನ್ನು ಕೊಡಲಾಗಿದೆ. ಶ್ಲೋಕಗಳು ಸುಲಭ ಗ್ರಾಹ್ಯವಾಗುವಂತೆ ಯಥೋಚಿತ ಶೀರ್ಷಿಕೆಗಳನ್ನೂ ಕೊಡಲಾಗಿದೆ ಮನುಸ್ಮೃತಿಯ ಮಹತ್ತ್ವವನ್ನು ಪರಿಚಯಮಾಡಿಕೊಡುವ ದೃಷ್ಟಿಯಿಂದ ಮಾತ್ರ ಈ ಸಂಗ್ರಹವು ಹೊರಟಿರುವುದರಿಂದ ಇದನ್ನು ಮನುಸ್ಮೃತಿಯ ಸಮಗ್ರ ಅಧ್ಯಯನ ಎಂದು ಭಾವಿಸಕೂಡದು

## ಸ್ವಾಯಂಭುವ ಮನು

ಮನುಸ್ಮೃತಿಯನ್ನು ರಚಿಸಿದ ಸ್ವಾಯಂಭುವ ಮನುವು ಚತುರ್ಮುಖ ಬ್ರಹ್ಮನಿಂದ ಜನಿಸಿದ ಮಹಾನುಭಾವರಲ್ಲಿ ಒಬ್ಬನು 'ಸ್ವಾಯಂಭುವ' ಎಂದರೆ 'ಸ್ವಯಂಭೂ' ನಾಮಕ ಬ್ರಹ್ಮದೇವರ ಮಗ ಎಂದೇ ಅರ್ಥ ಮನ್ವಂತರಗಳ ಪ್ರವರ್ತಕರಾದ [1]ಹದಿನಾಲ್ಕು ಮನುಗಳಲ್ಲಿ ಈತನು ಮೊದಲನೆಯವನು 'ಶತರೂಪಾ' ಈತನ ಪತ್ನಿ; ಇವರಿಬ್ಬರ ದಾಂಪತ್ಯದಲ್ಲಿ ಪ್ರಿಯವ್ರತ ಮತ್ತು ಉತ್ತಾನಪಾದ ಎಂಬ ಇಬ್ಬರು ಪುತ್ರರೂ, ಆಕೂತಿ,

---

1 ಚತುರ್ದಶಮನುಗಳು

| | | | |
|---|---|---|---|
| ಸ್ವಾಯಂಭುವ | ಸ್ವಾರೋಚಿಷ | ಉತ್ತಮ | ತಾಪಸ |
| ರೈವತ | ಚಾಕ್ಷುಷ | ವೈವಸ್ವತ | ಸೂರ್ಯವಾಣಿ |
| ದಕ್ಷಸಾವರ್ಣಿ | ಬ್ರಹ್ಮಸಾವರ್ಣಿ | ಧರ್ಮಸಾವರ್ಣಿ | |
| ರುದ್ರಸಾವರ್ಣಿ | ದೇವಸಾವರ್ಣಿ ಮತ್ತು | ಇಂದ್ರಸಾವರ್ಣಿ | |

ದೇವಹೂತಿ ಮತ್ತು ಪ್ರಸೂತಿ ಎಂಬ ಮೂವರು ಪುತ್ರಿಯರೂ ಜನಿಸಿದರು[1] ದೇವತಾ ತಾರತಮ್ಯದಲ್ಲಿ 'ಅಹಂಕಾರಿಕ ಪ್ರಾಣ'ನ ಅನಂತರದ ಸ್ಥಾನದಲ್ಲಿ (ಒಟ್ಟಾಗಿ ಅವರೋಹಣ ಕ್ರಮದಲ್ಲಿ 10ನೇ ಕಕ್ಷೆಯಲ್ಲಿ) ಬರುವ ಈತನು ಮನುಕುಲದ 'ಮೂಲ ಪುರುಷ' ಎಂದು ಪ್ರಸಿದ್ಧನಾಗಿರುವನು 'ಮಾನವ' ಎಂಬ ಹೆಸರೂ ಸಹ ಅವರೆಲ್ಲ ಮನುವನ್ನು ಮೂಲ ಪುರುಷನಾಗಿ ಹೊಂದಿದವರು ಎಂಬುದಕ್ಕೆ ಗಮಕವಾಗಿದೆ.

ರುಚಿ, ಕರ್ದಮ ಮತ್ತು ದಕ್ಷ ಎಂಬ ಮೂವರು ಪ್ರಜಾಪತಿಗಳು ಕ್ರಮವಾಗಿ ಈತನ ಅಳಿಯಂದಿರು ರುಚಿ ಆಕೂತಿಯಲ್ಲಿ 'ಯಜ್ಞ' ನಾಮಕನಾಗಿಯೂ, ಕರ್ದಮ-ದೇವಹೂತಿಯರಲ್ಲಿ ಕಪಿಲ ನಾಮಕನಾಗಿಯೂ, ಪರಮಾತ್ಮನು ಪ್ರಾದುರ್ಭವಿಸಿದನು ದಕ್ಷ-ಪ್ರಸೂತಿಯರ ಹದಿನಾರು ಪುತ್ರಿಯರಲ್ಲಿ ಒಬ್ಬಳಾದ 'ಮೂರ್ತಿ' ಎಂಬವಳಲ್ಲಿ ಯಮಧರ್ಮನ ನಿಮಿತ್ತದಿಂದ 'ಹರಿ, ಕೃಷ್ಣ ಮತ್ತು ನಾರಾಯಣ' ಎಂಬ ಮೂರು ರೂಪಗಳಿಂದ ಶ್ರೀಹರಿಯು ಅವತರಿಸಿದನು 'ನರ' ಎಂಬ ವಿಷ್ಣ್ವಾವಿಷ್ಟನಾದ ಶೇಷನು ಸಹ ಧರ್ಮತನಯನೇ ಆಗಿರುವನು ದೇವಹೂತಿಯ ಮಗಳಾದ ಅನಸೂಯೆಯಲ್ಲಿ ವಿಷ್ಣುವು 'ದತ್ತ'[2] ರೂಪದಿಂದ ಅವತರಿಸಿದನು

'ಪ್ರಿಯವ್ರತ'ನ ಪುತ್ರನಾಗಿ ತಾಪ(ಮ)ನ ಎಂಬ ಶ್ರೀಹರಿಯ ರೂಪವು ಪ್ರಾದುರ್ಭೂತವಾಯಿತು 'ಋಷಭ' ಎಂಬ ರೂಪವು ಪ್ರಿಯವ್ರತನ ಮೊಮ್ಮಗನಾದ ನಾಭಿರಾಜನ ಪುತ್ರತ್ವೇನ ಅವತರಿಸಿದ ಭಗವದ್ರೂಪವಾಗಿದೆ. ಹೀಗೆ ತನ್ನ ವಂಶದಲ್ಲಿ ಒಟ್ಟು ಎಂಟು ಭಗವದ್ರೂಪಗಳ[1] ಪ್ರಾದುರ್ಭಾವವನ್ನು ಕಂಡ ಮಹಾನುಭಾವ ಎಂಬುದು 'ಸ್ವಾಯಂಭುವ ಮನು'ವಿನ ಪ್ರಶಸ್ತಿಗಳಲ್ಲೊಂದು

---

1 ನ ಚಾಪಿ ಶತರೂಪಾಯಾಂ ಪಂಚಾಪತ್ಯಾನ್ಯಜೀಜನತ್ ।
ಪ್ರಿಯವ್ರತೋತ್ತಾನಪಾದೌ ತಿಸ್ರಃ ಕನ್ಯಾಶ್ಚ ಭಾರತ ॥
ಆಕೂತಿರ್ದೇವಹೂತಿಶ್ಚ ಪ್ರಸೂತಿರಿತಿ ಸತ್ತಮ ।
ಆಕೂತಿಂ ರುಚಯೇ ಪ್ರದಾತ್ ಕರ್ದಮಾಯ ತು ಮಧ್ಯಮಾಮ್ ॥
ದಕ್ಷಾಯಾದಾತ್ ಪ್ರಸೂತಿಂ ಚ ಯತ ಆಪೂರಿತಂ ಜಗತ್ ॥
-ಶ್ರೀಮದ್ಭಾಗವತಮಹಾಪುರಾಣ (3/12/54-56)

2 ದತ್ತಂ ದುರ್ವಾಸಸಂ ಸೋಮಮಾತ್ಮೇಶಬ್ರಹ್ಮಸಂಭವಾನ್ ॥
(ಭಾಗವತ 4/15)

ಪರಮ ಭಾಗವತ ಶಿರೋಮಣಿಗಳಲ್ಲಿ ಒಬ್ಬನೆಂದು ವಿಖ್ಯಾತನಾಗಿರುವ ಭಕ್ತ 'ಧ್ರುವ'ನು ಈತನ ಮಗನಾದ ಉತ್ತಾನಪಾದರಾಜನ ಜ್ಯೇಷ್ಠ ಪುತ್ರ, ಮತ್ತು 'ಪೃಥು' ಎಂಬ ಭಗವದಾವಿಷ್ಟ ಮಹನೀಯನು ಈ ಧ್ರುವನ ವಂಶದಲ್ಲಿ ಬಂದ ಮತ್ತೊಬ್ಬ ಮಹಾತ್ಮ

[4]'ಬರ್ಹಿಷ್ಮತೀ' ಎಂಬುದು ಸ್ವಾಯಂಭುವ ಮನುವಿನ ರಾಜಧಾನಿ; 71 ಮಹಾಯುಗಗಳಷ್ಟು ದೀರ್ಘಕಾಲ ಭೂಮಿಯನ್ನು ಪಾಲಿಸಿದ ಈತನಲ್ಲಿ ಮಹಾವಿಷ್ಣುವಿನ 'ಸ್ವಾಯಂಭುವ' ಎಂಬ ವಿಭೂತಿರೂಪದ ಸನ್ನಿಧಾನವು ಉಂಟು ಎಂಬುದಾಗಿ ಶ್ರೀಮದ್ಭಾಗವತ ಪುರಾಣದಲ್ಲಿ ಉಕ್ತವಾಗಿದೆ.

ತನ್ನ ಆಳ್ವಿಕೆಯ ಅವಧಿಯು ಪೂರೈಸಿದ ಅನಂತರ 'ಸುನಂದಾ' ಎಂಬ ತಪೋವನದಲ್ಲಿ ನೂರುವರ್ಷಗಳ ಕಾಲ ಉಗ್ರವಾದ ತಪಸ್ಸನ್ನು ಆಚರಿಸಿ ಈಶಾವಾಸ್ಯೋಪನಿಷತ್ತನ್ನು

---

[3] ಇದರಲ್ಲಿ 'ಆಕೂತಿ'ಯನ್ನು 'ರುಚಿ' ಪ್ರಜಾಪತಿಗೆ 'ಪುತ್ರಿಕಾ ಧರ್ಮ'ದ ನಿಬಂಧನೆಯಿಂದ ವಿವಾಹ ಮಾಡಿಕೊಟ್ಟಿದ್ದರಿಂದ, ಅವರಲ್ಲಿ ಅವತರಿಸಿದ 'ಯಜ್ಞ' ನಾಮಕ ಪರಮಾತ್ಮನು 'ದೌಹಿತ್ರ'ನಾದರೂ ಸ್ವಾಯಂಭುವಮನುವಿಗೆ 'ಪುತ್ರ' ಎಂದೇ ಪ್ರಸಿದ್ಧನಾದನು

ಆಕೂತಿಂ ರುಚಯೇ ಪ್ರಾದಾದಪಿ ಭ್ರಾತೃಮತೀಂ ನೃಪಃ ||
ಪುತ್ರಿಕಾಧರ್ಮಮಾಶ್ರಿತ್ಯ ಶತರೂಪಾನುಮೋದಿತಃ ||

- ಭಾಗವತ (4/1/2)

[4] ಬರ್ಹಿಷ್ಮತೀಂ ನಾಮ ವಿಭುರ್ಯಾಂ ನಿರ್ವಿಶ್ಯ ಸಮಾವಸತ್ ।
ತಸ್ಯಾಂ ಪ್ರವಿಷ್ಟೋ ಭವನಂ ತಾಪತ್ರಯವಿನಾಶನಮ್ ||

- ಭಾಗವತ (3/22/32)

ಮನುಪುತ್ರನಾದ 'ಪ್ರಿಯವ್ರತ'ನ ಪತ್ನಿಯ ಹೆಸರೂ ಸಹ 'ಬರ್ಹಿಷ್ಮತೀ' ಎಂದಾಗಿತ್ತು (ಅಥ ಚ ದುಹಿತರಂ ಪ್ರಜಾಪತೇರ್ವಿಶ್ವಕರ್ಮಣ ಉಪಯೇಮೇ ಬರ್ಹಿಷ್ಮತೀಮ್)

- ಭಾಗವತ (5/1/24)

[5] ಸ್ತ್ರೀಣಾಂ ತು ಶತರೂಪಾಽಹಂ ಪುಂಸಾಂ ಸ್ವಾಯಂಭುವೋ ಮನುಃ ।

- ಭಾಗವತ (11/16/25)

ಸಾಕ್ಷಾತ್ಕರಿಸಿಕೊಂಡದ್ದು ಈತನ ಮತ್ತೊಂದು ಅಪೂರ್ವಸಾಧನೆ. ಈಶಾವಾಸ್ಯ ಮಂತ್ರೋಪನಿಷತ್ತಿನ ದ್ರಷ್ಟಾರನೆಂದೇ ಇಂದಿಗೂ ಈತನನ್ನು ಸತ್ಸಂಪ್ರದಾಯವು ಗೌರವಿಸಿದೆ ಈತನ ದೌಹಿತ್ರನಾಗಿ ಅವತರಿಸಿದ 'ಯಜ್ಞನಾಮಕ ಪರಮಾತ್ಮನು ಈಶಾವಾಸ್ಯದ ಪ್ರತಿಪಾದ್ಯ ದೇವತೆಯಾಗಿರುವನು; ಸ್ವಾಯಂಭುವ ಮನುವು ಈಶಾವಾಸ್ಯವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಿದ್ದ ಕಾಲದಲ್ಲಿ ರುದ್ರದೇವರ ವರದಿಂದ ಅವಧ್ಯರಾಗಿದ್ದ ಒಂದು ರಾಕ್ಷಸರ ಗುಂಪು ಆತನನ್ನು ತಿನ್ನಲು ಬಂದಾಗ, ಯಜ್ಞನಾಮಕ ಶ್ರೀಹರಿಯು ಆವರನ್ನೆಲ್ಲ ಸಂಹರಿಸಿ ಅವನನ್ನು ಸಲಹಿದ ವಿವರವು ಶ್ರೀಮದ್ಭಾಗವತ ಪುರಾಣದಲ್ಲಿ[6] ಬಂದಿದೆ

'[7]ದಶರಥ' ಮತ್ತು 'ವಿಷ್ಣುಯಶಸ್' (ಹರಿವ್ರತ) ಎಂಬ ಎರಡು ಈತನ ಅವತಾರಗಳು; ತ್ರೇತಾಯುಗದ ಅವತಾರವಾದ 'ದಶರಥ'ನಿಂದ ಶ್ರೀರಾಮನೂ ಕಲಿಯುಗದ ಅವತಾರವಾದ ಕಲ್ಕಿಯೂ ಪ್ರಾದುರ್ಭವಿಸಿದ ವಿವರವು ಪುರಾಣಗಳಲ್ಲಿ ದೊರೆಯುತ್ತದೆ. ಶ್ರೀಕೃಷ್ಣ ಭಕ್ತರಲ್ಲಿ ಅಗ್ರಗಣ್ಯರ ನಾಲಿಗೆನೇರಿದ್ ಅಕ್ರೂರನು, 'ಕಿಶೋರ' ಎಂಬ ದೇವಗಂಧರ್ವನ ಅವತಾರವಾಗಿದ್ದು ಅವನಲ್ಲಿ ಸ್ವಾಯಂಭುವ ಮನುವಿನ

---

[6] ಸುನಂದಾಯಾಂ ವರ್ಷಶತಂ ಪದೈಕೇನ ಭುವಂ ಸ್ಪೃಶನ್ ।
ತಪ್ಯಮಾನಸ್ತಪೋ ಘೋರಮಿದಮನ್ವಾಹ ಭಾರತ ॥
ಇತಿ ಮಂತ್ರೋಪನಿಷದಂ ವ್ಯಾಹರಂತಂ ಸಮಾಹಿತಂ ।
ದೃಷ್ಟ್ವಾಽಸುರಾ ಯಾತುಧಾನಾ ಜಗ್ಧುಮಭ್ಯದ್ರವತ್ ಕ್ರುಧಾ ॥
ತಾಂಸ್ತಥಾಽವಸಿತಾನ್ ವೀಕ್ಷ್ಯ ಯಜ್ಞಃ ಸರ್ವಗತೋ ಹರಿಃ ।
ಯಾಮೈಃ ಪರಿವೃತೋ ದೇವೈರ್ಹತ್ವಾಽಶಾಸತ್ತ್ರಿವಿಷ್ಟಪಂ ॥
-ಶ್ರೀಮದ್ಭಾಗವತ (8/1/8, 17-18)

ಈ ವಿಷಯವು ಬ್ರಹ್ಮಾಂಡ ಪುರಾಣದಲ್ಲಿಯೂ ಬಂದಿದೆ ಎಂದು ಈಶಾವಾಸ್ಯೋಪನಿಷತ್ತಿನ ಶ್ರೀಮಧ್ವಭಾಷ್ಯದಲ್ಲಿ ಬಂದಿದೆ

[7] ರಾಜಾ ದಶರಥಃ ಪೂರ್ವಂ ಮನುಃ ಸ್ವಾಯಂಭುವಃ ಸ್ಮೃತಃ । (36)
ಹರಿವ್ರತಃ ಕಲ್ಕಿಪಿತಾ ಮನುಃ ಸ್ವಾಯಂಭುವಸ್ತ್ವತಿ ॥ (89)
-ನಾರಾಯಣಪಂಡಿತಾಚಾರ್ಯಕೃತ 'ಅಂಶಾವೇಶಾವತಾರನಿರ್ಣಯಃ

[8] ಸಂಸೇವನಾಯ ಸ ಹರೇರಭವತ್ ಪುರೈವ ನಾಮ್ನಾ
ಕಿಶೋರ ಇತಿ ಯಃ ಸುರಗಾಯಕೋಽಭೂತ್ ।

ಅಂಶವು (ಮತ್ತು ಚತುರ್ಮುಖ ಬ್ರಹ್ಮದೇವರ ಆವೇಶವು) ಸಹ ಉಂಟು ಎಂಬುದಾಗಿ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ. ಭಗವದ್ಗೀತೆಯು ಉಲ್ಲೇಖಿಸುವ ನಾಲ್ವರು ಪ್ರಮುಖ ಮನುಗಳಲ್ಲಿ ಈತನೂ ಒಬ್ಬನು ಎಂಬುದಾಗಿ ಗೀತಾಭಾಷ್ಯದಲ್ಲಿದೆ (10/5).

'ಉಪಸ್ಥತತ್ತ್ವ'ಕ್ಕೆ ಅಭಿಮಾನಿ ಎಂಬುದು ಸ್ವಾಯಂಭುವ ಮನುವಿನ ಮತ್ತೊಂದು ವೈಶಿಷ್ಟ್ಯ. 'ಮನುವು ಮಹಾನುಭಾವನು; ಆತನ ಜೀವನ ಕ್ರಮ ಅಪೂರ್ವವಾಗಿತ್ತು; ವಿಷಯ ಭೋಗಗಳಿಗೆ ವಶನಾಗದೆ ವಿಷ್ಣು ಚಿಂತನೆಯಲ್ಲಿ ನಿರತನಾಗಿದ್ದ ಪುಣ್ಯಜೀವಿ' ಇದೇ ಮೊದಲಾಗಿ ಭಾಗವತ ಪುರಾಣವು[9] ಈತನನ್ನು ಕೊಂಡಾಡಿದೆ ಮುನಿಗಳ ಪ್ರಾರ್ಥನೆಯಂತೆ ನಾನಾತೆರನಾದ ಧರ್ಮಗಳನ್ನು ಅವರಿಗೆಲ್ಲ ಮನುವು ಉಪದೇಶಿಸಿದ ಉಲ್ಲೇಖವೂ ಭಾಗವತ ಪುರಾಣದಲ್ಲಿ ಬಂದಿದೆ.[10]

---

ಸ್ವಾಯಂಭುವಸ್ಯ ಚ ಮನೋಃ ಪರಮಾಂಶಯುಕ್ತಃ
ಆವೇಶಯುಕ್ ಕಮಲಜಸ್ಯ ಬಭೂವ ವಿದ್ವಾನ್ ॥
ಸೋಽಕ್ರೂರ ಇತ್ಯಭವದುತ್ತಮಪೂಜ್ಯಕರ್ಮಾ
ವೃಷ್ಣಿಷ್ವಧಾನ ನ ಹಿ ಭೋಜಪತೇಶ್ಚ ಮಂತ್ರೀ ॥
-ಮಹಾಭಾರತತಾತ್ಪರ್ಯನಿರ್ಣಯ (13/85, 86)

[9]ಸಭಾರ್ಯಃ ಸಪ್ರಜಃ ಕಾಮಾನ್ ಬುಭುಜೇಽನ್ಯಾವಿರೋಧತಃ ।
ಸಂಗೀಯಮಾನಸತ್ಕೀರ್ತಿಃ ಸಸ್ತ್ರೀಭಿಃ ಸುರಗಾಯಕೈಃ ॥
ಪ್ರತ್ಯೂಷೇಷ್ವನುಬದ್ಧೇನ ಹೃದಾ ಶೃಣ್ವನ್ ಹರೇಃ ಕಥಾಃ ।
ನಿಷ್ಣಾತಂ ಯೋಗಮಾಯಾಸು ಮುನಿಂ ಸ್ವಾಯಂಭುವಂ ಮನುಮ್ ॥
ಯದಾ ಭ್ರಂಶಯಿತುಂ ಭೋಗಾ ನ ಶೇಕುರ್ಭಗವತ್ಪರಮ್ ।
ಅಯಾತಯಾಮಾಸ್ತಸ್ಯಾಸನ್ ಯಾಮಾಃ ಸ್ವಾಂತರಯಾಪನಾಃ ।
ಶೃಣ್ವತೋ ಧ್ಯಾಯತೋ ವಿಷ್ಣೋಃ ಕುರ್ವತೋ ಬ್ರುವತಃ ಕಥಾಃ ॥
ಸ ಏವಂ ಸ್ವಾಂತರಂ ನಿನ್ಯೇ ಯುಗಾನಾಮೇಕಸಪ್ತತಿಮ್ ।
ವಾಸುದೇವಪ್ರಸಂಗೇನ ಪರಿಭೂತಗತಿತ್ರಯಃ ॥
ಶಾರೀರಾ ಮಾನಸಾ ದಿವ್ಯಾ ವೈಯಾಸೇ ಯೇ ಚ ಮಾನುಷಾಃ ।
ಭೌತಿಕಾಶ್ಚ ಕಥಂ ಕ್ಲೇಶಾ ಬಾಧಂತೇ ಹರಿಸಂಶ್ರಯಮ್ ॥ಭಾಗವತ (3/22)

[10]ಯಃ ಪೃಷ್ಟೋ ಮುನಿಭಿಃ ಪ್ರಾಹ ಧರ್ಮಾನ್ ನಾನಾವಿಧಾನ್ ಶುಭಾನ್
ನೃಣಾಂ ವರ್ಣಾಶ್ರಮಾಣಾಂ ಚ ಸರ್ವಭೂತಹಿತಃ ಸದಾ ॥- ಭಾಗವತ 3/22-38 (11)

## ಮನುಸ್ಮೃತಿ

'ಧರ್ಮಶಾಸ್ತ್ರ'ವು ಚತುರ್ದಶವಿದ್ಯೆಗಳಲ್ಲಿ ಒಂದು ಎಂಬುದಾಗಿ ಪರಿಗಣಿತವಾಗಿದೆ; ವೇದೇತಿಹಾಸಗಳಲ್ಲೂ, ಪುರಾಣಗಳಲ್ಲೂ ಬಂದಿರುವ ಧರ್ಮ ಸ್ವರೂಪದ ಸಂಗ್ರಹ ಮತ್ತು ವಿವರಣೆಯು ಧರ್ಮಶಾಸ್ತ್ರದ ಮುಖ್ಯ ವಿಷಯ. 'ಸ್ಮೃತಿ', ಎಂಬುದಕ್ಕೆ 'ಪೌರುಷೇಯಗ್ರಂಥ' ಎಂಬ ಪ್ರಸಿದ್ಧವಾದ ಅರ್ಥದೊಂದಿಗೆ 'ಧರ್ಮಶಾಸ್ತ್ರ'ವೆಂಬ ಮತ್ತೊಂದು ವಿಶೇಷ ಅರ್ಥವೂ ಇದೆ 'ಧರ್ಮಶಾಸ್ತ್ರ'[1] ಎಂಬುದಾಗಿ ಪ್ರಸಿದ್ಧವಾಗಿರುವ ಸ್ಮೃತಿಗಳ ಸಂಖ್ಯೆ[2] ಅಪಾರವಾಗಿದ್ದರೂ ಅವುಗಳಲ್ಲಿ ಹದಿನೆಂಟು ಸ್ಮೃತಿಗಳನ್ನು

---

ಇಂದು ಉಪಲಬ್ಧವಿರುವ ಮನುಸ್ಮೃತಿ ಭೃಗುಪ್ರೋಕ್ತ ಎಂಬ ಮಾತು ಸಹ ಭಾಗವತದ ಮಾತಿಗೆ ಪೋಷಕವಾಗಿದೆ. ಮನುವು ಅನೇಕ ಮುನಿಗಳಿಗೆ ಧರ್ಮಗಳನ್ನು ಬೋಧಿಸಿದಾಗ ಅವರಲ್ಲಿ ಕೆಲವರು ಅದನ್ನು ವಿಶೇಷವಾಗಿ ಪ್ರಸಾರಮಾಡಿದರು. ಭೃಗು ಮಹರ್ಷಿಯು ಅಂತಹವರಲ್ಲಿ ಒಬ್ಬರು ಎಂಬುದಾಗಿ ಭಾವಿಸಬಹುದು ಸ್ಮೃತಿಮುಕ್ತಾವಲಿ, ಸ್ಮೃತ್ಯರ್ಥಸಾಗರ ನಿರ್ಣಯಸಿಂಧು, ಧರ್ಮಸಿಂಧು, ಸ್ಮೃತಿಕೌಸ್ತುಭ ಮೊದಲಾದ ಅನೇಕ ನಿಬಂಧಗ್ರಂಥಗಳಲ್ಲಿ ಮನುಸ್ಮೃತಿಯ ವಾಕ್ಯಗಳು ವಿಪುಲವಾಗಿ ಉಲ್ಲೇಖಿಸಲ್ಪಟ್ಟಿದ್ದು, ಅವುಗಳಲ್ಲಿನ ಅನೇಕ ಶ್ಲೋಕಗಳು ಇಂದು ಉಪಲಬ್ಧವಿರುವ 'ಮನುಸ್ಮೃತಿ'ಯಲ್ಲಿ ದೊರೆಯುವುದಿಲ್ಲ, ಅವು ಭೃಗುಪ್ರೋಕ್ತವಲ್ಲದ ಮನುಸ್ಮೃತಿಯ ಶ್ಲೋಕಗಳಾಗಿರಬಹುದು; ಅಥವಾ ಅನಂತರಕಾಲದಲ್ಲಿ ಅವು ಬಿಟ್ಟುಹೋಗಿರಲೂಬಹುದು

[1] ಧರ್ಮಶಾಸ್ತ್ರಂ ತು ವೈ ಸ್ಮೃತಿಃ । (ಮನುಸ್ಮೃತಿ 2/10)

[2] ಮನ್ವತ್ರಿವಿಷ್ಣುಹಾರೀತಯಾಜ್ಞವಲ್ಕ್ಯೋಶನೋಽಂಗಿರಾಃ ।
ಯಮಾಪಸ್ತಂಬಸಂವರ್ತಾಃ ಕಾತ್ಯಾಯನಬೃಹಸ್ಪತೀ ॥
ಪರಾಶರವ್ಯಾಸಶಂಖಲಿಖಿತಾ ದಕ್ಷಗೌತಮೌ ।
ಶಾತಾತಪೋ ವಸಿಷ್ಠಶ್ಚ ಧರ್ಮಶಾಸ್ತ್ರಪ್ರವರ್ತಕಾಃ । -(ಯಾಜ್ಞವಲ್ಕ್ಯಸ್ಮೃತಿ)

ತೇಷಾಂ ಮನ್ವಂಗಿರೋವ್ಯಾಸಗೌತಮಾತ್ರ್ಯುಶನೋಯಮಾಃ ।
ವಸಿಷ್ಠದಕ್ಷಸಂವರ್ತಶಾತಾತಪಪರಾಶರಾಃ ॥
ವಿಷ್ಣ್ವಾಪಸ್ತಂಬಹಾರೀತಾಃ ಶಂಖಃ ಕಾತ್ಯಾಯನೋ ಗುರುಃ ।
ಪ್ರಚೇತಾ ನಾರದೋ ಯೋಗೀ ಬೋಧಾಯನಪಿತಾಮಹೌ ॥

ಪ್ರಧಾನವೆಂದು ಪರಿಗಣಿಸಲಾಗಿದೆ; ಪುರಾಣಗಳಲ್ಲಿರುವಂತೆ ಸ್ಮೃತಿಗಳಲ್ಲೂ ಸಾತ್ವಿಕ, ರಾಜಸ ಮತ್ತು ತಾಮಸ ಎಂಬ ಪ್ರಭೇದವೂ ಉಂಟು,

**ಅಷ್ಟಾದಶಸ್ಮೃತಿಗಳು**

| ಸಾತ್ವಿಕಸ್ಮೃತಿಗಳು | ರಾಜಸಸ್ಮೃತಿಗಳು | ತಾಮಸಸ್ಮೃತಿಗಳು |
|---|---|---|
| ವ್ಯಾಸಸ್ಮೃತಿ | ಮನುಸ್ಮೃತಿ | ಗೌತಮಸ್ಮೃತಿ |
| ವಸಿಷ್ಠಸ್ಮೃತಿ | ಯಾಜ್ಞವಲ್ಕ್ಯಸ್ಮೃತಿ | ಬೃಹಸ್ಪತಿಸ್ಮೃತಿ |
| ಹಾರೀತಸ್ಮೃತಿ | ಅತ್ರಿಸ್ಮೃತಿ | ಸಂವರ್ತಸ್ಮೃತಿ |
| ಪರಾಶರಸ್ಮೃತಿ | ದಕ್ಷಸ್ಮೃತಿ | ಯಮಸ್ಮೃತಿ |
| ಭಾರದ್ವಾಜಸ್ಮೃತಿ | ಕಾತ್ಯಾಯನಸ್ಮೃತಿ | ಶಂಖಸ್ಮೃತಿ |
| ಕಶ್ಯಪಸ್ಮೃತಿ | ವಿಷ್ಣುಸ್ಮೃತಿ | ಔಶನಸ್ಮೃತಿ |

ತ್ರಿವಿಧ ಪುರಾಣಗಳಲ್ಲಿ ಸಾತ್ತ್ವಿಕಾದಿ ತ್ರಿವಿಧ ಅಂಶಗಳೂ ಇದ್ದು ಪ್ರಾಧಾನ್ಯವಿವಕ್ಷೆಯಿಂದ ಸಾತ್ತ್ವಿಕಾದಿ ವಿಭಾಗವನ್ನು ಮಾಡಿರುವಂತೆ, ಸ್ಮೃತಿಗಳಲ್ಲೂ ಸಾತ್ತ್ವಿಕಾದಿ ವ್ಯವಸ್ಥೆಯನ್ನು ತಿಳಿಯಬೇಕು. ಇತರ ಎಲ್ಲಾ ಶಾಸ್ತ್ರಗಳಿಗೂ ಶ್ರೀವೇದವ್ಯಾಸರ ರಚನೆಗಳೇ ಮೂಲವಾಗಿರುವಂತೆ (ವ್ಯಾಸೋಚ್ಛಿಷ್ಟಂ ಜಗತ್ಸರ್ವಮ್) [1]ಮನ್ವಾದಿಸಕಲಸ್ಮೃತಿಗಳಿಗೂ ಶ್ರೀವೇದವ್ಯಾಸರ 'ವ್ಯಾಸಸ್ಮೃತಿ' ಯೇ ಮೂಲವೆಂಬುದು ಸ್ಪಷ್ಟ. ಶ್ರೀ ಮಧ್ವಾಚಾರ್ಯರು ಉಲ್ಲೇಖಿಸಿರುವ ಸ್ಮೃತಿ ವಾಕ್ಯಗಳಲ್ಲಿ ವ್ಯಾಸಸ್ಮೃತಿಯ ವಾಕ್ಯಗಳದೇ ಸಿಂಹಪಾಲು ಎಂಬುದು ಇದಕ್ಕೆ ಪೋಷಕವಾಗಿದೆ. ಅನಂತರದ ಪ್ರಧಾನ ಸ್ಮೃತಿಗಳಲ್ಲಿ ಗಾತ್ರ ಮತ್ತು ವಿಷಯವ್ಯಾಪ್ತಿಗಳ ದೃಷ್ಟಿಯಿಂದ ಮನುಸ್ಮೃತಿಯು ಅನಂತರದ

---

ಸುಮಂತಾಃ ಕಾಶ್ಯಪೋ ಬಭ್ರುಃ ಪೈಠೀನೋ ವ್ಯಾಘ್ರ ಏವ ಚ ।
ಸತ್ಯವ್ರತೋ ಭರದ್ವಾಜೋ ಗಾರ್ಗಿಃ ಕಾರ್ಷ್ಣಾಜನಿಸ್ತಥಾ ॥
ವ್ಯಾಸಃ ಕಾತ್ಯಾಯನಶ್ಚೈವ ಜಾತೂಕರ್ಣ್ಯಃ ಕಪಿಂಜಲಃ ।
ಬೋಧಾಯನಃ ಕಣಾದಶ್ಚ ವಿಶ್ವಾಮಿತ್ರಸ್ತಥೈವ ಚ ॥
ಪೈಠೀನಸಿರ್ಗೋಭಿಲಶ್ಚ ಉಪಸ್ಮೃತಿವಿಧಾಯಕಾಃ ॥ -ಪೈಠೀನಸಿಃ

[1]ಪ್ರಮಾಣಾನ್ಯೇವ ಮನ್ವಾದ್ಯಾಃ ಸ್ಮೃತಯೋಽಪ್ಯನುಕೂಲತಃ ।
-ಮಹಾಭಾರತತಾತ್ಪರ್ಯನಿರ್ಣಯ (1/32)

ಸ್ಥಾನದಲ್ಲಿ ಉಲ್ಲೇಖಿಸಲ್ಪಟ್ಟಿರುವ ಏಕಮಾತ್ರ ಸ್ಮೃತಿ ಎಂದು ಮಾನ್ಯವಾಗಿದೆ 'ಯದ್ವೈ ಕಿಂಚ ಮನುರವದತ್ ತದ್ಭೇಷಜಮ್'[1] ಎಂಬ ಶ್ರುತಿವಚನದಲ್ಲೂ, ಮನುಸ್ಮೃತಿಯ ಮಹತ್ತ್ವವು ವ್ಯಕ್ತವಾಗುತ್ತದೆ ಹೀಗೆ 'ವ್ಯಾಸಸ್ಮೃತಿ'ಯ ಅನಂತರದ ಸ್ಮೃತಿಗಳ ಮಟ್ಟಿಗೆ 'ಸ್ಮೃತಿರಾಜ' ಎನ್ನಿಸಿರುವುದು ಮನುಸ್ಮೃತಿಯ ಅಪಾರ ಮಹತ್ತ್ವಕ್ಕೆ ದ್ಯೋತಕ.

ಮಹಾಭಾರತ, ಭಾಗವತ ಮೊದಲಾದ ಇತಿಹಾಸ ಪುರಾಣಗಳಲ್ಲಿ ಅನೇಕೆ ನಲ ಕಂಡುಬರುವ 'ಮನುಃ ಸ್ವಾಯಂಭುವೋಽಬ್ರವೀತ್' ಎಂಬ ಉಲ್ಲೇಖವು ವೈದಿಕ ಪರಂಪರೆಯಲ್ಲಿ ಮನುವಿನ ಮಾತಿಗಿರುವ ಅಪಾರ ಮಹತ್ತ್ವಕ್ಕೆ ಗಮಕವಾಗಿದೆ.

ಮಾನವ ಕುಲಕ್ಕೆ ಮೂಲಪುರುಷ ಎಂಬುದರ ಜೊತೆಗೆ, ಜಗತ್ತನ್ನು ಆಳಿದ ಮೊದಲ ಚಕ್ರವರ್ತಿ ಎಂಬುದು ಸ್ವಾಯಂಭುವ ಮನುವಿನ ಮತ್ತೊಂದು ಹಿರಿಮೆ, (ಗೀತೆ ಎಂದರೆ ಭಗವದ್ಗೀತೆ, ದೇವನೆಂದರೆ ನಾರಾಯಣ, 'ವ್ಯಾಸ' ಎಂದರೆ 'ವೇದವ್ಯಾಸ', ಸೂತ್ರ ಎಂದರೆ ಬ್ರಹ್ಮಸೂತ್ರ ಎಂಬಂತೆ 'ಮನು' ಎಂದರೆ 'ಸ್ವಾಯಂಭುವ ಮನು' ಎಂದೇ ಅರ್ಥ. [2]ತಾಪಸ ಎಂಬ ಮನುವು ಸಾಕ್ಷಾತ್ ನಾರಾಯಣನೇ ಆದ್ದರಿಂದ ಆತನನ್ನು ಬಿಟ್ಟು ಉಳಿದ ಮನುಗಳಲ್ಲಿ ಸ್ವಾಯಂಭುವಮನುವಿನ ಸ್ಥಾನ ತುಂಬಾ ವಿಶಿಷ್ಟವಾದುದು ಎಂದು ಭಾವ.)

---

[1]ಈ ಶ್ರುತಿ ವಾಕ್ಯದಲ್ಲಿನ ಮನು ಶಬ್ದವು ಮುಖ್ಯವಾಗಿ ಶ್ರೀವಾಯುದೇವರನ್ನೇ ಸೂಚಿಸುತ್ತದೆ, 'ಮನುವು ನುಡಿದದ್ದೆಲ್ಲ ಪ್ರಮಾಣ' ಎಂಬ ಮಹತ್ತ್ವವು ಬ್ರಹ್ಮವಾಯುಗಳು ಮೊದಲಾದ ಋಜುಗಳಿಗಷ್ಟೇ ಅನ್ವಯಿಸುವುದು ಎಂದು ಭಾಗವತಾದಿ ಶಾಸ್ತ್ರಗಳಿಂದ ತಿಳಿಯುತ್ತದೆ. 'ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ' (2/6/33) ಮನು ಎಂದರೆ 'ಬ್ರಹ್ಮಾದಿ ದೇವತೆಗಳು' ಎಂಬ ಅರ್ಥವೂ ಉಂಟು:

ಮನವೋ ಬೋಧವ್ಯೆಶೇಷ್ಯಾದ್ದೇವಾ ಬ್ರಹ್ಮಾದಯಃ ಸ್ಮೃತಾಃ ||

(ಮಹಾವಿಷ್ಣುಪುರಾಣ-ಗೀತಾಭಾಷ್ಯ 10-6)

[2]ಸ ಹ್ಯಾಚಾರಾನುವಾಚೇಶಃ ಪ್ರೇರಯನ್ಮನುಮಾನಸಮ್ ||

(ಬ್ರಹ್ಮಪುರಾಣ- ಬೃಹದಾರಣ್ಯಕಭಾಷ್ಯ 3/5/4)

ಆತನು ಉಪದೇಶಿಸಿದ ಧರ್ಮಸಂಹಿತೆಗೆ ವೈಶಿಷ್ಟ್ಯ ಬರಲು ಇದೂ ಒಂದು ಕಾರಣ ಸ್ವತಃ ಭಗವಂತನೇ[1] ಮನುವಿನ ಮನಸ್ಸನ್ನು ಪ್ರೇರಿಸಿ ನುಡಿಸಿದ ಧರ್ಮಶಾಸ್ತ್ರ ಎಂಬುದಾಗಿ ಇದನ್ನು ಪ್ರಾಚೀನ ಗ್ರಂಥಗಳು ಗೌರವಿಸಿವೆ.

## [2]ಮನುಸ್ಮೃತಿಯ ಮುಖ್ಯವಿಷಯಗಳು

ಭೃಗುಪ್ರೋಕ್ತವೆಂಬುದಾಗಿ ಇಂದು ಉಪಲಬ್ಧವಿರುವ 'ಮನುಸ್ಮೃತಿ' ಯಲ್ಲಿ ಒಟ್ಟು ಹನ್ನೆರಡು ಅಧ್ಯಾಯಗಳಿದ್ದು, ಅದರಲ್ಲಿನ ಒಟ್ಟು ಶ್ಲೋಕಗಳ ಸಂಖ್ಯೆ 2681 ಆಗಿದೆ ಅಧ್ಯಾಯಕ್ರಮದಲ್ಲಿ ಅದರಲ್ಲಿ ಬರುವ ಮುಖ್ಯ ವಿಷಯಗಳು ಮತ್ತು ಆಯಾ ಅಧ್ಯಾಯಗಳಲ್ಲಿನ ಒಟ್ಟು ಶ್ಲೋಕ ಸಂಖ್ಯೆಯು ಹೀಗಿದೆ :-

1. ಸೃಷ್ಟಿಪ್ರಲಯವಿಚಾರ (117)
2. ಚೌಲ, ಉಪನಯನ ಸಂಸ್ಕಾರಗಳು (49)
3. ವಿವಾಹ, ಪಂಚಮಹಾಯಜ್ಞಗಳು ಇತ್ಯಾದಿ (286)
4. ಗೃಹಸ್ಥಧರ್ಮ ಮತ್ತು ನಿತ್ಯಾಹ್ನಿಕ (260)
5. ಮೃತ್ಯುಜಿಜ್ಞಾಸೆ, ಆಶೌಚ ಮತ್ತು ಸ್ತ್ರೀಧರ್ಮ (169)
6 ವಾನಪ್ರಸ್ಥಧರ್ಮ ಮತ್ತು ಸನ್ಯಾಸ ಧರ್ಮ (97)
7 ರಾಜಧರ್ಮಗಳು (226)
8. ವ್ಯವಹಾರ, ಸಾಕ್ಷಿ, ಶಿಕ್ಷೆ ಇತ್ಯಾದಿ ವಿವರಗಳು (420)
9 ದಾಂಪತ್ಯಧರ್ಮ ಮತ್ತು ದಾಯಭಾಗ ವಿಚಾರ (336)
10 ಸಂಕರಜಾತಿಗಳು ಮತ್ತು ಆಪದ್ಧರ್ಮ (131)
11. ಪ್ರಾಯಶ್ಚಿತ್ತಕಥನ (264)
12. ಕರ್ಮದ ಫಲಾಫಲಗಳು (126)

---

[1]ತಾಪಸಸ್ಯ ಭಗವದವತಾರತ್ವಾದನುಕ್ತಿಃ - ಗೀತಾಭಾಷ್ಯ (10/6)

[2]ಮನುಸ್ಮೃತಿಗೆ ಹತ್ತಾರು ವ್ಯಾಖ್ಯಾನಗಳು ಉಪಲಬ್ಧವಿದ್ದು, ಅವುಗಳಲ್ಲಿ ಮೇಧಾತಿಥಿ ಮತ್ತು ಕುಲ್ಲೂಕ ಎಂಬವರ ವ್ಯಾಖ್ಯಾನಗಳು ತುಂಬಾ ಪ್ರಸಿದ್ಧವಾಗಿವೆ ಅಲ್ಲದೆ ಸರ್ವಜ್ಞನಾರಾಯಣ ರಾಘವಾನಂದ, ನಂದನ ಮತ್ತು ರಾಮಚಂದ್ರ ಎಂಬವರಿಂದ ರಚಿತವಾದ ವ್ಯಾಖ್ಯಾನಗಳೂ ಸಹ ಪ್ರಕಟವಾಗಿವೆ

'ಮನುಸ್ಮೃತಿ'ಯು ಹೀಗೆ ಅನೇಕ ಕಾರಣಗಳಿಂದ ವೈದಿಕಸಂಸ್ಕೃತಿಯ ವಿವಿಧ ಧರ್ಮಸೂಕ್ಷ್ಮಗಳ ವಿಶ್ವಕೋಶವಾಗಿ ಪರಂಪರೆಯಲ್ಲಿ ಮಾನ್ಯವಾಗಿದೆ. ಇದರ ಸಮಗ್ರ ಅಧ್ಯಯನವನ್ನು ಮಾಡಲಾಗದ ಜನಗಳಿಗಾಗಿ ಒಂದು 'ಪ್ರವೇಶಿಕೆ'ಯನ್ನಾಗಿ ಈ 'ಮನುಸುಭಾಷಿತ'ವನ್ನು ಸಿದ್ಧಪಡಿಸಲಾಗಿದೆ 'ಮನುಸ್ಮೃತಿ'ಯ ಪರಿಚಯದೊಂದಿಗೆ ವೈದಿಕಸಂಸ್ಕೃತಿಯ ವಿವಿಧಧರ್ಮಗಳ ಸಾಮಾನ್ಯ ಪರಿಚಯವನ್ನು ಸಹ ಇದರಿಂದ ಪಡೆದುಕೊಳ್ಳಬಹುದು

ಇದರ ಮೊದಲ ಆವೃತ್ತಿಯು 1978ರಲ್ಲಿ ಪ್ರಕಾಶಿತವಾಗಿತ್ತು ಅದರ ಪ್ರತಿಗಳು ಬಹುಬೇಗನೇ ತೀರಿ, ಬಹು ಜನರು ಇದರ ಪ್ರತಿಗಳಿಗಾಗಿ ಬರೆಯುತ್ತಿದ್ದರು. ಅದಕ್ಕಾಗಿ 1990ರಲ್ಲಿ ದ್ವಿತೀಯಾವೃತ್ತಿಯು ಪ್ರಕಟವಾಯಿತು. ಅದರಲ್ಲಿ ಅನೇಕ ಹೊಸ ವಿಷಯಗಳನ್ನು ಸೇರಿಸಲಾಗಿತ್ತು. ಗೀತೆ, ಮಹಾಭಾರತ, ಉಪನಿಷತ್ತುಗಳು, ಮಹಾಭಾರತತಾತ್ಪರ್ಯ ನಿರ್ಣಯ ಮೊದಲಾದ ಆಕರ ಗ್ರಂಥಗಳಿಂದಾಯ್ದ ವಾಕ್ಯಗಳನ್ನು ಸಂವಾದಿಯಾಗಿ ಅಲ್ಲಲ್ಲಿ ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ; ಈ ಟಿಪ್ಪಣಿಗಳು ಮನುಸ್ಮೃತಿಯ ವಿಚಾರಗಳ 'ಸಂವಾದ'ಕ್ಕೆ ಮಾತ್ರವಲ್ಲದೆ, ವಿವರಣೆಯಾಗಿಯೂ ಸಹ ಉಪಯುಕ್ತವಾಗುತ್ತವೆ. ಮನುವಿನ ಭಾವವನ್ನು ಸ್ಫುಟಮಾಡಿಕೊಳ್ಳಲು ಇವುಗಳಿಂದಾಗುವ ಉಪಕಾರ ಅಪಾರ ಮಾತ್ರವಲ್ಲದೆ, ಗೀತೆ ಮಹಾಭಾರತ ಮೊದಲಾದ ಗ್ರಂಥಗಳ ಭಾವಗ್ರಹಣಕ್ಕೆ ಮನುಸ್ಮೃತಿಯಿಂದ ದೊರೆಯುವ ಉಪಕಾರವನ್ನು ಅಡಿಟಿಪ್ಪಣಿಯಲ್ಲಿನ ವಾಕ್ಯಗಳಿಂದ ಅರ್ಥಮಾಡಿಕೊಳ್ಳಬಹುದು ಅದರ ಪ್ರತಿಗಳೂ ಬಹುಬೇಗನೇ ತೀರಿ, ಈ ತೃತೀಯಾವೃತ್ತಿ ಪ್ರಕಟವಾಗುತ್ತಿದೆ.

ವೈದಿಕ ಸಂಸ್ಕೃತಿಯ ಆಚಾರ ವಿಚಾರಗಳು ಮತ್ತು ಅವುಗಳ ಉಪಯುಕ್ತತೆಯ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿಕೊಡಲು ನಮ್ಮ ಐತರೇಯ ಪ್ರಕಾಶನವು ಯೋಜಿಸಿ 'ಸದಾಚಾರವಿನೋದ' ಎಂಬ ಮಾಲೆಯನ್ನು ಪ್ರಾರಂಭಿಸಿದೆ. ಇದರ ಮೊದಲ ಭಾಗದಲ್ಲಿ ಏಕಾದಶೀ, ಕೃಷ್ಣಾಷ್ಟಮೀ, ಚಾತುರ್ಮಾಸ್ಯಾದಿವ್ರತಗಳು, ತಪ್ತಮುದ್ರಾಧಾರಣ, ಗ್ರಹಣಾದಿಗಳ ಬಗ್ಗೆ ವಿವರಗಳನ್ನು ಸಂಗ್ರಹಿಸಿಕೊಡಲಾಗಿತ್ತು. ಇದರ ಮುಂದಿನ (ಮೂರನೆಯ) ಭಾಗವು ಇಷ್ಟರಲ್ಲೆ ಪ್ರಕಟವಾಗಲಿದ್ದು ಅದರಲ್ಲಿ ಸಂಧ್ಯಾವಂದನೆ, ದೇವಪೂಜಾ, ಬ್ರಹ್ಮಯಜ್ಞ, ವೈಶ್ವದೇವ ಇತ್ಯಾದಿಗಳ ಬಗ್ಗೆ ವಿವರಗಳು ಸಂಕಲಿತವಾಗಿವೆ

**ವ್ಯಾಸನಕೆರೆ ಪ್ರಭಂಜನಾಚಾರ್ಯ**

ಬಹುಧಾನ್ಯ (ಮಾಘ ವ್ಯಾಸ ಪೂರ್ಣಿಮಾ)
ಬೆಂಗಳೂರು. 31. 1 1999

ಪಾಜಕ, ನಂ 67, 50 ಅಡಿರಸ್ತೆ,
ಹನುಮಂತನಗರ, ಬೆಂಗಳೂರು- 19

# ಶ್ರೀಮನ್ಮಧ್ವಾಚಾರ್ಯರಿಂದ ಉದ್ಧೃತವಾಗಿರುವ ಮನುಸ್ಮೃತಿಯಲ್ಲಿನ ಕೆಲವು ಶ್ಲೋಕಗಳು

ವೇದೋಽಖಿಲಂ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ ।
ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥

- ಗೀತಾಭಾಷ್ಯ (2/45)

ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿಹ ಚೋಚ್ಯತೇ ।
ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಂ ॥

- ಗೀತಾಭಾಷ್ಯ (3/4)

ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರೀಯೋ ಹ್ಯುತ್ತರೋತ್ತರಮ್ ॥
ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ ॥

- ಗೀತಾಭಾಷ್ಯ (17/1)

ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ ॥

- ಗೀತಾತಾತ್ಪರ್ಯ (17/23)

— 0 —

||ಶ್ರೀಃ||

## ಸದಾಚಾರವಿನೋದ-ಭಾಗ ೨

# ಮನುಸುಭಾಷಿತ

|| ಶ್ರೀಗುರುಭ್ಯೋ ನಮಃ ಹರಿಃ ಓಂ ||

### ಗ್ರಂಥದ ವಿಷಯ

1. *ವಿದ್ವದ್ಭಿಃ ಸೇವಿತಃ ಸದ್ಭಿರ್ನಿತ್ಯಮದ್ವೇಷರಾಗಿಭಿಃ ।
ಹೃದಯೇನಾಭ್ಯನುಜ್ಞಾತೋ ಯೋ ಧರ್ಮಸ್ತಂ ನಿಬೋಧತ ॥ -II 1

ಕಾಮಕ್ರೋಧಗಳನ್ನು ಜಯಿಸಿದ ಜ್ಞಾನಿಗಳಾದ ಸತ್ಪುರುಷರಿಂದ ಮನಃಪೂರ್ವಕವಾಗಿ ನಿತ್ಯದಲ್ಲೂ ಆಚರಿಸಲ್ಪಡುವ ಧರ್ಮದ ಸ್ವರೂಪವನ್ನು ತಿಳಿದುಕೊಳ್ಳಿರಿ

#### ಧರ್ಮದ ಮಹತ್ವ

2 ನಾಮುತ್ರ ಹಿ ಸಹಾಯಾರ್ಥಂ ಪಿತಾ ಮಾತಾ ಚ ತಿಷ್ಠತಃ ।
ನ ಪುತ್ರದಾರಾ ನ ಜ್ಞಾತಿಃ ಧರ್ಮಸ್ತಿಷ್ಠತಿ ಕೇವಲಃ ॥ -IV 239

ಪರಲೋಕದ ಸಹಾಯಕ್ಕೆ ತಂದೆ, ತಾಯಿ, ಹೆಂಡಿರು, ಮಕ್ಕಳು, ಸಂಬಂಧಿಗಳು ಮೊದಲಾಗಿ ಯಾರೂ ಒದಗುವುದಿಲ್ಲ; ಆಗ ನೆರವಿಗೆ ಬರುವುದು ಧರ್ಮ ಮಾತ್ರವೇ.

3 ಏಕಃ ಪ್ರಜಾಯತೇ ಜಂತುರೇಕ ಏವ ಪ್ರಲೀಯತೇ ।
ಏಕೋಽನುಭುಂಕ್ತೇ ಸುಕೃತಂ ಏಕ ಏವ ಚ ದುಷ್ಕೃತಮ್ ॥ -IV 240

---

*'ಅನಾರ್ಯಜುಷ್ಟಂ' (II/2) ಎಂಬ ಭಗವದ್ಗೀತೆಯ ಮಾತಿನಲ್ಲಿ ಈ ಅರ್ಥವು ಬಂದಿದೆ

ಜೀವನು ಒಂಟಿಯಾಗಿಯೇ ಹುಟ್ಟಿ ಬರುತ್ತಾನೆ, ಒಂಟಿಯಾಗಿಯೇ ಮರಣ ಹೊಂದುತ್ತಾನೆ; ಪುಣ್ಯಫಲವನ್ನು ಅನುಭವಿಸುತ್ತಾನೆ, ಹಾಗೆಯೇ ಪಾಪದ ಫಲವನ್ನು ಅನುಭವಿಸುವುದೂ ಸಹ ಒಂಟಿಯಾಗಿಯೇ.

4 ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಠಸಮಂ ಕ್ಷಿತೌ ।
ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥ -IV 241

ಕಟ್ಟಿಗೆ ಹಾಗೂ ಮಣ್ಣಹೆಂಟೆಗಳಿಗೆ ಸಮನಾದ ಮೃತಶರೀರವನ್ನು ಭೂಮಿಯಲ್ಲಿರಿಸಿ ಬಾಂಧವರೆಲ್ಲ ಮುಖ ತಿರುಗಿಸಿಕೊಂಡು ಹೊರಟು ಬಿಡುತ್ತಾರೆ, ಧರ್ಮವು ಮಾತ್ರ ಜೀವನನ್ನು ಹಿಂಬಾಲಿಸಿ ಹೊರಡುತ್ತದೆ.

5. ತಸ್ಮಾದ್ಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿನುಯಾಚ್ಛನೈಃ ।
ಧರ್ಮೇಣ ಹಿ ಸಹಾಯೇನ ತಮಸ್ತರತಿ ದುಸ್ತರಂ ॥ -IV 242

ಆದ್ದರಿಂದ ತನ್ನ ಒಳಿತಿಗಾಗಿ ನಿತ್ಯದಲ್ಲೂ ಮೆಲ್ಲಮೆಲ್ಲನೆ ಧರ್ಮವನ್ನು ಸಂಗ್ರಹಿಸುತ್ತಿರಬೇಕು; ಧರ್ಮದ ಸಹಾಯದಿಂದಾಗಿ ದಾಟಲಸಾಧ್ಯವೆನ್ನಿಸುವ ಅಜ್ಞಾನವೆಂಬ ಕಗ್ಗತ್ತಲೆಯನ್ನೂ ಸಹ ದಾಟಿಬಿಡಬಹುದು.

## ಧರ್ಮವನ್ನು ಎಂದೂ ಕೈ ಬಿಡಕೂಡದು

6 ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ* ।
ತಸ್ಮಾದ್ಧರ್ಮೋ ನ ಹಂತವ್ಯೋ ಮಾ ನೋ ಧರ್ಮೋ ಹತೋಽವಧೀತ್ ॥
-VIII 15

ಧರ್ಮವನ್ನು ನಾವು ಆಚರಿಸದಿದ್ದರೆ ಅದು ನಮ್ಮನ್ನು ನಾಶಗೊಳಿಸುತ್ತದೆ ಆಚರಿಸಿದರೆ ಅದು ನಮ್ಮನ್ನು ಕಾಪಾಡುತ್ತದೆ ಆದ್ದರಿಂದ ಎಂದೂ ಧರ್ಮವನ್ನು ಕೈಬಿಡಕೂಡದು, ಹಾಗೆ ಕೈಬಿಡಲ್ಪಟ್ಟ ಧರ್ಮವು ನಮ್ಮ ನಾಶಕ್ಕೆ ಕಾರಣವಾಗಕೂಡದಷ್ಟೆ!

---

★ ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ।
-ಭಗವದ್ಗೀತೆ II/40

## ಧರ್ಮವೊಂದೇ ನಿಜವಾದ ಗೆಳೆಯ

7 ಏಕ ಏವ ಸುಹೃದ್ಧರ್ಮೋ ನಿಧನೇಽಪ್ಯನುಯಾತಿ ಯಃ ।
ಶರೀರೇಣ ಸಮಂ ನಾಶಂ ಸರ್ವಮನ್ಯದ್ಧಿ ಗಚ್ಛತಿ[1] ॥ -VIII 17

ಮರಣಾನಂತರವೂ ಹಿಂಬಾಲಿಸಿ ಬರುವ ಧರ್ಮವೊಂದೇ ನಮ್ಮ ನಿಜವಾದ ಸ್ನೇಹಿತ ಉಳಿದುದೆಲ್ಲ ಶರೀರದೊಂದಿಗೇ ನಾಶವಾಗಿಬಿಡುತ್ತವೆ.

## ಧರ್ಮದ ಲಕ್ಷಣಗಳು

8 ಧೃತಿಃ ಕ್ಷಮಾ ಶಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ ॥ VI 92

ಧೃತಿ, ಕ್ಷಮೆ, ಭಗವನ್ನಿಷ್ಠೆ ಕಳ್ಳತನ ಮಾಡದಿರುವಿಕೆ, ಶುಚಿತ್ವ, ಇಂದ್ರಿಯನಿಗ್ರಹ, ಬುದ್ಧಿ, ವಿದ್ಯೆ, ಸತ್ಯ ಮತ್ತು ಕೋಪಗೊಳ್ಳದಿರುವಿಕೆ ಈ ಹತ್ತೂ ಧರ್ಮದ ಮುಖ್ಯ ಲಕ್ಷಣಗಳಾಗಿವೆ

## ಧರ್ಮವನ್ನು ತಿಳಿಯಲು ಆಧಾರಗಳು

9 ಪ್ರತ್ಯಕ್ಷಂ ಚಾನುಮಾನಂ ಚ ಶಾಸ್ತ್ರಂ ಚ ವಿವಿಧಾಗಮಂ ।
ತ್ರಯಂ ಸುವಿದಿತಂ ಕಾರ್ಯಂ ಧರ್ಮಶುದ್ಧಿಮಭೀಪ್ಸತಾ ॥ -XII 105

ಧರ್ಮದ ಸ್ವರೂಪವನ್ನು ಸರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳ ಬಯಸುವವನು ಪ್ರತ್ಯಕ್ಷ, ಅನುಮಾನ( ಯುಕ್ತಿ), ಮತ್ತು ವಿವಿಧ ರೂಪದಲ್ಲಿರುವ ಆಗಮ ಎಂಬ ಈ ಮೂರು ಪ್ರಮಾಣಗಳನ್ನು ಉತ್ತಮ ರೀತಿಯಲ್ಲಿ ವಿಮರ್ಶಿಸಬೇಕು.

10. ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ[2] ।
ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಂ ॥ =II 12

---

1 ಪತಿತಸ್ಯಾಸ್ಯ ದೇಹಸ್ಯ ಕಾಷ್ಠವಿಷ್ಠಾಸಮಸ್ಯ ಚ ।
ಫಲಾನಿ ತ್ರೀಣಿ ಶಿಷ್ಯಂತೇ ವಿದ್ಯಾ ಕರ್ಮ ಸುತಾ ಇತಿ ॥ (21/371)
-ಮಹಾಭಾರತತಾತ್ಪರ್ಯನಿರ್ಣಯ

2 ಧರ್ಮಾಚಲಾ ಮಮ ಮತಿರ್ಹಿ ತದೇವ ಮಾನಮ್-ಮ.ಭಾ.ತಾ ನಿ (19/152)

(ಅಪೌರುಷೇಯ) ವೇದ, ಸ್ಮೃತಿ (ವೇದಬಲ್ಲವರ ಮಾತು) ಸದಾಚಾರ (ವೇದಜ್ಞಾನಿಗಳ ನಡತೆ) ಮತ್ತು ಆತ್ಮ ಸಂತೋಷ ಈ ನಾಲ್ಕೂ ಧರ್ಮದ ಮುಖ್ಯ ಲಕ್ಷಣಗಳು. ಎಂದರೆ ಒಂದು ಕಾರ್ಯವನ್ನು ಧರ್ಮವೆಂದು ನಿರ್ಧರಿಸುವಲ್ಲಿ ಈ ನಾಲ್ಕೂ ಮುಖ್ಯ ಆಧಾರಗಳೆನ್ನಿಸುತ್ತವೆ ಎಂದು ಭಾವ. (ಇವುಗಳಲ್ಲಿ ಪೂರ್ವ ಪೂರ್ವ ಪ್ರಾಬಲ್ಯ)

11 ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಂ ।
ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥ II 6

ಎಲ್ಲ ವೇದಗಳೂ ಧರ್ಮವನ್ನು ತಿಳಿಸುವ ಮುಖ್ಯ ಪ್ರಮಾಣಗಳು ವೇದವನ್ನು ತಿಳಿದವರ ಸ್ಮೃತಿ ಮತ್ತು ಶೀಲಗಳು, ಸಜ್ಜನರ ನಡವಳಿಕೆ ಮತ್ತು ಆತ್ಮಸಂತೋಷ ಇವೂ ಸಹ ಧರ್ಮನಿರ್ಣಾಯಕವಾದ ಪ್ರಮಾಣಗಳಾಗಿವೆ.

## ವೇದಗಳೇ ಪರಮ ಪ್ರಮಾಣ

12. ಬಿಭರ್ತಿ ಸರ್ವಭೂತಾನಿ ವೇದಶಾಸ್ತ್ರಂ ಸನಾತನಮ್ ।
ತಸ್ಮಾದೇತತ್ಪರಂ ಮನ್ಯೇ ಯಜ್ಜಂತೋರಸ್ಯ ಸಾಧನಮ್ ॥ XII 99

ಅನಾದಿಯಾದ ವೇದವೆಂಬ ಶಾಸ್ತ್ರವು ಸಕಲಪ್ರಾಣಿಗಳನ್ನೂ ರಕ್ಷಿಸುತ್ತದೆ, ಆದ್ದರಿಂದ ಎಲ್ಲ ಜೀವಿಗಳಿಗೂ ಶ್ರೇಷ್ಠ ಧರ್ಮೋಪದೇಶದ ಸಾಧನವೆಂದರೆ ವೇದವೇ ಸರಿ. ಅಂದರೆ ವೇದವೇ ಧರ್ಮನಿರ್ಣಾಯಕವಾದ ಪರಮ ಪ್ರಮಾಣ. ವೇದವಿರೋಧಿಯಲ್ಲದ ಸ್ಮೃತಿಗಳು, ವೇದಜ್ಞರಾದವರ ಸ್ಮೃತಿ ಶೀಲಗಳು ಸಜ್ಜನರ ನಡವಳಿಕೆ, ಆತ್ಮಸಂತೋಷ ಇವುಗಳು ಕ್ರಮವಾಗಿ ಅನಂತರದ ಪ್ರಮಾಣಗಳೆನ್ನಿಸುತ್ತವೆ

13. ಅನಾಮ್ನಾತೇಷು ಧರ್ಮೇಷು ಕಥಂ ಸ್ಯಾದಿತಿ ಚೇದ್ಭವೇತ್।
ಯಂ ಶಿಷ್ಟಾ ಬ್ರಾಹ್ಮಣಾ ಬ್ರೂಯುಃ ಸ ಧರ್ಮಃ ಸ್ಯಾದಶಂಕಿತಃ ॥ XII 108

ವೇದ ಮೊದಲಾದ ನಾಲ್ಕು ಮುಖ್ಯ ಆಧಾರಗಳಲ್ಲಿ ಹೇಳಲ್ಪಡದಿರುವ ವಿಷಯಗಳ ಬಗ್ಗೆ ಧರ್ಮನಿರ್ಣಯ ಹೇಗೆ ಎಂದು ಚಿಂತಿಸಬೇಕಾಗಿಲ್ಲ. ಯಾವುದನ್ನು ಶಿಷ್ಟರಾದ ಬ್ರಾಹ್ಮಣರು ಧರ್ಮವೆಂದು ಹೇಳುತ್ತಾರೋ ಅದೂ ಸಹ ಧರ್ಮವೆನಿಸುತ್ತದೆ

## ಶಿಷ್ಟ ಬ್ರಾಹ್ಮಣರ ಲಕ್ಷಣ

14. ಧರ್ಮೇಣಾಧಿಗತೋ ಯಸ್ತು ವೇದಃ ಸಪರಿಬೃಂಹಣಃ *।
ತೇ ಶಿಷ್ಟಾ ಬ್ರಾಹ್ಮಣಾ ಜ್ಞೇಯಾಃ ಶ್ರುತಿಪ್ರತ್ಯಕ್ಷಹೇತವಃ ॥ XII 109

ಯಾರು ವಿಧ್ಯುಕ್ತ ರೀತಿಯಲ್ಲಿ ವೇದಗಳನ್ನು ಇತಿಹಾಸ ಪುರಾಣಗಳ ಸಹಾಯದೊಂದಿಗೆ ಅರ್ಥಮಾಡಿಕೊಂಡಿರುತ್ತಾರೆಯೋ ಅವರೇ ಶಿಷ್ಟ ಬ್ರಾಹ್ಮಣರು, ಅವರು ಯಾವಾಗಲೂ ಶ್ರುತಿ, ಪ್ರತ್ಯಕ್ಷ ಮತ್ತು ಯುಕ್ತಿ ಎಂಬ ಮೂರೂ ಪ್ರಮಾಣಗಳಿಗೆ ಅನುಗುಣವಾಗಿಯೇ ಮಾತನಾಡುತ್ತಾರೆ ಮತ್ತು ಆಚರಿಸುತ್ತಾರೆ.

## ಜ್ಞಾನದ ವಿಷಯದಲ್ಲಿ ಬಹುಮತ ಉಪಯೋಗಿಯಲ್ಲ

15 ಏಕೋಽಪಿ ವೇದವಿದ್ಧರ್ಮಂ ಯಂ ವ್ಯವಸ್ಯೇದ್ದ್ವಿಜೋತ್ತಮಃ।
ನ ವಿಜ್ಞೇಯಃ ಪರೋ ಧರ್ಮೋ ನಾಜ್ಞಾನಾಮುದಿತೋಽಯುತೈಃ ॥ XII 113

ಒಬ್ಬನೇ ಒಬ್ಬ ವೇದವನ್ನು ತಿಳಿದ ದ್ವಿಜೋತ್ತಮನು ಯಾವುದನ್ನು ಧರ್ಮವೆಂದು ವಿಧಿಸುತ್ತಾನೆಯೋ ಅದು ಶ್ರೇಷ್ಠವಾದ ಧರ್ಮವೇ ಸರಿ; ಆದರೆ ಅಜ್ಞಾನಿಗಳು ಹತ್ತು ಸಾವಿರ ಸಂಖ್ಯೆಯಲ್ಲಿ ಸೇರಿ ನಿರ್ಣಯಿಸಿದರೂ ಅದಕ್ಕೆ 'ಧರ್ಮ' ವೆಂಬ ಹೆಸರು ಎಂದೂ ಬರಲಾರದು.

## ತಿಳಿಯದವನು ಧರ್ಮೋಪದೇಶ ಮಾಡಕೂಡದು

16. ಯಂ ವದಂತಿ ತಮೋಭೂತಾ ಮೂರ್ಖಾ ಧರ್ಮಮತದ್ವಿದಃ।
ತತ್ಪಾಪಂ ಶತಧಾ ಭೂತ್ವಾ ತದ್ವಕ್ತೄನನುಗಚ್ಛತಿ ॥ XII 115

---

* ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।
ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಚಲಿ(ರಿ)ಷ್ಯತಿ ॥

-ಮಹಾಭಾರತ

ಧರ್ಮವನ್ನು ತಿಳಿಯದ ಜನರು ಎಂದೂ ಸಹ ಧರ್ಮನಿರ್ಣಯ ಕಾರ್ಯಕ್ಕೆ ಕೈ ಹಾಕಕೂಡದು, ತಿಳಿಯದ್ದನ್ನು ಹೇಳುವ ಆ ರೀತಿಯ ಪಾಪವು ಸಾವಿರಪಟ್ಟು ವರ್ಧಿಸಿ ಹಾಗೆ ಹೇಳಿದವನನ್ನೇ ಮುತ್ತಿಕೊಳ್ಳುತ್ತದೆ

## ಧರ್ಮನಿರ್ಣಯದಲ್ಲಿ ತರ್ಕದ ಸ್ಥಾನ

17 ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ।
*ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ ॥ -XII 106

ಋಷಿಗಳ ಧರ್ಮೋಪದೇಶವನ್ನು ವೇದಶಾಸ್ತ್ರಗಳಿಗೆ ಅನುಸಾರಿಯಾದ ನಿರ್ದುಷ್ಟ ತರ್ಕದ ಸಹಾಯದಿಂದ ಯಾವನು ವಿಮರ್ಶಿಸುವನೋ ಅಂತಹವನಿಗೆ ಮಾತ್ರ ಧರ್ಮದ ಸ್ವರೂಪವು ಅರ್ಥವಾಗುತ್ತದೆ; ಉಳಿದವರಿಗಲ್ಲ.

## ಶಾಸ್ತ್ರಾಭಾಸಗಳಿಂದ ಮೋಸಹೋಗಬಾರದು

18. ಯಾ ವೇದಬಾಹ್ಯಾಃ ಸ್ಮೃತಯೋ ಯಾಶ್ಚ ಕಾಶ್ಚ ಕುದೃಷ್ಟಯಃ ।
ಸರ್ವಾಸ್ತಾ ನಿಷ್ಫಲಾಃ ಪ್ರೇತ್ಯ ತಮೋನಿಷ್ಠಾ ಹಿ ತಾಃ ಸ್ಮೃತಾಃ ॥ -XII 95

ವೇದ ವಿರುದ್ಧವಾದ ಸ್ಮೃತಿಗಳು ಮತ್ತು ಅವಿಚಾರ ಮೂಲವಾದ ದರ್ಶನಗಳು ಮನುಷ್ಯನ ಬಾಳಿಗೆ ಯಾವ ಬೆಳಕನ್ನೂ ಕೊಡಲಾರವು. ಅವೆಲ್ಲ ನಿಷ್ಫಲವೇ ಸರಿ, ಪರಲೋಕದಲ್ಲೂ ಅವುಗಳಿಂದ ಸುಖವು ದೊರೆಯಲಾರದು. ಅವುಗಳ ಅನುಷ್ಠಾನ ಅಧಃಪತನಕ್ಕೇ ಕಾರಣವಾಗುತ್ತದೆ

---

* ಪೂರ್ವೋತ್ತರಾವಿರೋಧೇನ ಕೋಽತ್ರಾರ್ಥೋಽಭಿಮತೋ ಭವೇತ್ ।
ಇತ್ಯಾದ್ಯಮೂಹನಂ ತರ್ಕಃ ಶುಷ್ಕತರ್ಕಂ ತು ವರ್ಜಯೇತ್ ॥
-ಬ್ರಹ್ಮಸೂತ್ರಭಾಷ್ಯ ।1 1

ಯಥಾಕಾಮೋಽನುಮಾ ಯಸ್ಮಾತ್ತಸ್ಮಾತ್ಸಾಽನವಗಾ ಶ್ರುತೇಃ ।
ಪೂರ್ವಾಪರಾವಿರೋಧಾಯ ಚೇಷ್ಯತೇ ನಾನ್ಯಥಾ ಕ್ವಚಿತ್ ॥
-ಬ್ರಹ್ಮಸೂತ್ರಭಾಷ್ಯ ।1 6

ನೈಷಾ ತರ್ಕೇಣ ಮತಿರಾಪನೇಯಾ
ಪ್ರೋಕ್ತಾಽನ್ಯೇನೈವ ಸುಜ್ಞಾನಾಯ ಪ್ರೇಷ್ಠ ॥
-ಕಠೋಪನಿಷತ್

## ಧರ್ಮಜ್ಞಾನಕ್ಕೆ ಅರ್ಹತೆ

19 ಅರ್ಥಕಾಮೇಷ್ವಸಕ್ತಾನಾಂ ಧರ್ಮಂ ಜ್ಞಾನಂ ವಿಧೀಯತೇ ।
ಧರ್ಮಂ ಜಿಜ್ಞಾಸಮಾನಾನಾಂ ಪ್ರಮಾಣಂ ಪರಮಂ ಶ್ರುತಿಃ ॥ -II 13

ಅರ್ಥ ಮತ್ತು ಕಾಮಗಳಲ್ಲಿ ಅಭಿಲಾಷೆಯನ್ನು ತೊರೆದವರಿಗೆ ಧರ್ಮ ಜಿಜ್ಞಾಸೆಯಲ್ಲಿ ಅರ್ಹತೆ ಉಂಟಾಗತ್ತದೆ, ಹಾಗೆ ಧರ್ಮವನ್ನು ತಿಳಿಯ ಬಯಸುವವರಿಗೆ ವೇದವೇ ಮುಖ್ಯವಾದ ಪ್ರಮಾಣವಾಗಿದೆ.

## ಧರ್ಮಾನುಷ್ಠಾನದ ಫಲ

20. *ಶ್ರುತಿಸ್ಮೃತ್ಯುದಿತಂ ಧರ್ಮಮನುತಿಷ್ಠನ್ ಹಿ ಮಾನವಃ ।
ಇಹ ಕೀರ್ತಿಮವಾಪ್ನೋತಿ ಪ್ರೇತ್ಯ ಚಾನುತ್ತಮಾಂ ಗತಿಂ ॥ -II 9

ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಧರ್ಮವನ್ನು ಸರಿಯಾದ ರೀತಿಯಲ್ಲಿ ಆಚರಿಸುವ ಮಾನವನು ಈ ಲೋಕದಲ್ಲಿ ಕೀರ್ತಿಯನ್ನೂ ಪರಲೋಕದಲ್ಲಿ ಅತ್ಯುತ್ತಮವಾದ ಸುಖವನ್ನೂ ಹೊಂದುತ್ತಾನೆ.

## ನಿಷ್ಕಾಮತೆಯ ಅರ್ಥ

21. ಅಕಾಮಸ್ಯ ಕ್ರಿಯಾ ಕಾಚಿದ್ದೃಶ್ಯತೇ ನೇಹ ಕರ್ಹಿಚಿತ್ ।
ಯದ್ಯದ್ಧಿ ಕುರುತೇ ಕಿಂಚಿತ್ತತ್ತತ್ಕಾಮಸ್ಯ ಚೇಷ್ಟಿತಮ್ ॥ -II 4

ಆಸೆಯನ್ನು ಹೊಂದಿರದವನು ಯಾವ ಕಾರ್ಯವನ್ನು ಮಾಡುವುದೂ ಸಾಧ್ಯವಿಲ್ಲ; ಮನುಷ್ಯನು ಏನನ್ನೇ ಮಾಡಿದರೂ ಅದಕ್ಕೆ ಹಿನ್ನಲೆಯಾಗಿ ಆಸೆಯೊಂದು ಇದ್ದೇ ಇರುತ್ತದೆ.

## ಸದಾಶೆಯು ಶ್ರೇಯಸ್ಸಿನ ಮೂಲ

22. ತೇಷು ಸಮ್ಯಗ್ ವರ್ತಮಾನೋ ಗಚ್ಛತ್ಯಮರಲೋಕತಾಮ್ ।
ಯಥಾ ಸಂಕಲ್ಪಿತಾಂಶ್ಚೇಹ ಸರ್ವಾನ್ ಕಾಮಾನ್ ಸಮಶ್ನುತೇ ॥ -II 5

---

* ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥
-ಭಗವದ್ಗೀತೆ (16/23)

[1]ಆಶೆಗಳ ವಿಷಯದಲ್ಲಿ ವಿಹಿತರೀತಿಯಲ್ಲಿ ವರ್ತಿಸುವವನು ಶಾಶ್ವತ ಸುಖಕ್ಕೆ ಭಾಗಿಯಾಗುತ್ತಾನೆ ಅಲ್ಲದೆ ಈ ಲೋಕದಲ್ಲೂ ಸಹ ಅವನು ತಾನು ಬಯಸುವ ಎಲ್ಲವನ್ನೂ ಪಡೆದುಕೊಳ್ಳುತ್ತಾನೆ

## ದುರಾಸೆಗೆ ಕೊನೆಯೇ ಇಲ್ಲ

23 [2]ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ -II 94

ಬಯಸುವ ವಸ್ತುಗಳನ್ನು ಪಡೆಯುವ ಮಾತ್ರದಿಂದಲೇ ಆಶೆಯೆಂದೂ ಶಮನವಾಗುವುದಿಲ್ಲ, ಬದಲಾಗಿ ಹವಿಸ್ಸಿನಿಂದ ಅಗ್ನಿಯು ಹೇಗೋ ಹಾಗೆ ಅದು ಹೆಚ್ಚುತ್ತಲೇ ಹೋಗುತ್ತದೆ.

## ಕಾಮತ್ಯಾಗವೇ ಶ್ರೇಯಸ್ಕರ

24 ಯಶ್ಚೈತಾನ್ಪ್ರಾಪ್ನುಯಾತ್ಸರ್ವಾನ್ ಯಶ್ಚೈತಾನ್ಕೇವಲಾಂಸ್ತ್ಯಜೇತ್ ।
ಪ್ರಾಪಣಾತ್ಸರ್ವಕಾಮಾನಾಂ ಪರಿತ್ಯಾಗೋ ವಿಶಿಷ್ಯತೇ ॥ - II 95

ಒಂದು ಕಡೆ ತನ್ನ ಆಶೆಗಳನ್ನೆಲ್ಲ ಪೂರೈಸಿಕೊಳ್ಳುವುದು; ಮತ್ತೊಂದು ಕಡೆ ಆಸೆಗಳನ್ನೆಲ್ಲ ತ್ಯಾಗ ಮಾಡುವುದು, ಇವುಗಳಲ್ಲಿ ಆಸೆಗಳನ್ನು ಪೂರೈಸಿ ಕೊಳ್ಳುವುದಕ್ಕಿಂತ, ಅವುಗಳನ್ನು ತ್ಯಾಗ ಮಾಡುವುದೇ ಶ್ರೇಷ್ಠವೆನ್ನಿಸುತ್ತದೆ ಸದಾಶೆಯನ್ನು ಸಂಪೂರ್ತಿಯಿಂದಲೂ, ದುರಾಸೆಯನ್ನು ಸಂತ್ಯಾಗದಿಂದಲೂ ಗೆಲ್ಲಬೇಕು.

## ಪ್ರವೃತ್ತ ಕರ್ಮ-ನಿವೃತ್ತ ಕರ್ಮಗಳು

25 ಇಹ ಚಾಮುತ್ರ ವಾ ಕಾಮ್ಯಂ ಪ್ರವೃತ್ತಂ ಕರ್ಮ ಕೀರ್ತ್ಯತೇ ।
[3]ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತ ಮಿಹ ಚೋಚ್ಯತೇ ॥
ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಂ ॥ -XII 89-90

---

1 ಭಕ್ತಿಜ್ಞಾನಾದಿಪ್ರಾರ್ಥನಾ ಕಾರ್ಯೇತಿ ಸಿದ್ಧಮ್ ।
- ಗೀತಾಭಾಷ್ಯ (2/47)

2 ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ ॥
-ಮ.ಭಾ.ತಾ ನಿ (1/96)

3 ಇದು ಶ್ರೀಮಧ್ವಾಚಾರ್ಯರಿಂದ ಗೀತಾಭಾಷ್ಯದಲ್ಲಿ ಉದಾಹೃತವಾಗಿದೆ (2/47)

ಇಲ್ಲಾಗಲಿ, ಪರಲೋಕದಲ್ಲಾಗಲಿ ನಿರ್ದಿಷ್ಟವಾದ ವಿಷಯ ಸುಖವೊಂದನ್ನು ಗುರಿಯನ್ನಾಗಿರಿಸಿಕೊಂಡು ಮಾಡಲ್ಪಡುವ ಕರ್ಮವು ಪ್ರವೃತ್ತ ಕರ್ಮವೆನ್ನಿಸುತ್ತದೆ; ಅಂತಹ ಫಲದ ಆಸೆಯ ಹಿನ್ನೆಲೆಯನ್ನು ಹೊಂದದೆ ಪರಮಾತ್ಮ ಪ್ರೀತಿಯನ್ನು ಮಾತ್ರವೇ ಉದ್ದೇಶಿಸಿ, ಜ್ಞಾನಪೂರ್ವಕವಾಗಿ ಮಾಡಲ್ಪಡುವ ಕರ್ಮವು 'ನಿವೃತ್ತ ಕರ್ಮ' ವೆನ್ನಿಸುತ್ತದೆ ನಿವೃತ್ತಕರ್ಮವನ್ನು ಆಚರಿಸುವವನು ಪರಮಾತ್ಮನ ಸಾನ್ನಿಧ್ಯವನ್ನು ಹೊಂದುವನು

## ಕಾಮತ್ಯಾಗದಿಂದ ಮುಕ್ತಿ

26 ಯದಾ ಭಾವೇನ ಭವತಿ ಸರ್ವಭಾವೇಷು ನಿಃಸ್ಪೃಹಃ ।
ತದಾ ಸುಖಮವಾಪ್ನೋತಿ ಪ್ರೇತ್ಯ ಚೇಹ ಚ ಶಾಶ್ವತಂ ॥ -VI 80

ಮನಃಪೂರ್ವಕವಾಗಿ ಎಲ್ಲಾ ವಿಷಯಗಳಲ್ಲೂ ಯಾವಾಗ ಸಕಲ ವಿಧವಾದ ದುರಾಸೆಗಳೂ ಇಲ್ಲದಂತಾಗುವವೋ, ಆಗಲೇ ಮನುಷ್ಯನು ಇಲ್ಲೂ ಪರದಲ್ಲೂ ಶಾಶ್ವತವಾದ ಸುಖವನ್ನು ಪಡೆಯುತ್ತಾನೆ

## ದುರಾಸೆಯನ್ನು ತ್ಯಜಿಸಬೇಕು

27 ಇಂದ್ರಿಯಾರ್ಥೇಷು ಸರ್ವೇಷು ನ ಪ್ರಸಜ್ಯೇತ ಕಾಮತಃ ।
ಅತಿಪ್ರಸಕ್ತಿಂ ಚೈತೇಷಾಂ ಮನಸಾ ಸನ್ನಿವರ್ತಯೇತ್ ॥ -IV 16

ಆಸೆಗೊಳಗಾಗಿ ಎಂದೂ ಸಹ ಇಂದ್ರಿಯಗಳ ವಿಷಯಗಳಲ್ಲಿ ಆಸಕ್ತನಾಗಬಾರದು; ಇಂದ್ರಿಯಗಳು ಮೇರೆ ಮೀರಿ ವರ್ತಿಸುವುದನ್ನು ಮನಸ್ಸಿನ ಮೂಲಕ ತಡೆಗಟ್ಟಬೇಕು

## ಸಂಸಾರದ ಮೂಲ

28 ಇಂದ್ರಿಯಾಣಾಂ ಪ್ರಸಂಗೇನ ಧರ್ಮಸ್ಯಾಸೇವನೇನ ಚ ।
ಪಾಪಾನ್ ಸಂಯಾತಿ ಸಂಸಾರಾನವಿದ್ವಾಂಸೋ ನರಾಧಮಾಃ ॥ -XII 52

ಇಂದ್ರಿಯಗಳಲ್ಲಿ ಲೋಲುಪರಾಗುವುದರಿಂದಲೂ, ಧರ್ಮವನ್ನು ಆಚರಿಸದೆ ಇರುವುದರಿಂದಲೂ, ಮೂರ್ಖರಾದವರು ಪಾಪಕರವಾದ ಸಂಸಾರದಲ್ಲಿ ಬೀಳುತ್ತಾರೆ

## ಇಂತಹವರಿಗೆ ಉಪದೇಶ ಮಾಡಕೂಡದು

29. *ನಾಪೃಷ್ಟಃ ಕಸ್ಯಚಿದ್ಬ್ರೂಯಾನ್ನ ಚಾನ್ಯಾಯ್ಯೇನ ಪೃಚ್ಛತಃ ।
ಜಾನನ್ನಪಿ ಚ ಮೇಧಾವೀ ಜಡವಲ್ಲೋಕ ಆಚರೇತ್ ॥-II 110

ಕೇಳದೇ ಇರುವವನಿಗಾಗಲೀ, ದುರುದ್ದೇಶದಿಂದ ಕೇಳುವವನಿಗಾಗಲೀ, ಉಪದೇಶವನ್ನು ಮಾಡಕೂಡದು; ಅಂತಹವರ ಮಧ್ಯದಲ್ಲಿ ಜ್ಞಾನಿಯಾದವನು ಅಜ್ಞಾನಿಯಂತೆಯೇ ನಡೆದುಕೊಳ್ಳಬೇಕು.

30 ಧರ್ಮಾರ್ಥೌ ಯತ್ರ ನ ಸ್ಯಾತಾಂ ಶುಶ್ರೂಷಾ ವಾಽಪಿ ತದ್ವಿಧಾ ।
ತತ್ರ ವಿದ್ಯಾ ನ ವಕ್ತವ್ಯಾ ಶುಭಂ ಬೀಜಮಿವೋಷರೇ ॥ -II 112

ಧರ್ಮಾರ್ಥಗಳ ಸಿದ್ಧಿಯಾಗಲೀ, ಅವುಗಳಿಗೆ ಉಚಿತವಾದ ಕೇಳುವ ಮನೋಭಾವವಾಗಲೀ ಇಲ್ಲದವನಿಗೆ ವಿದ್ಯೆಯನ್ನು ಎಂದೂ ಉಪದೇಶಿಸಕೂಡದು ಉತ್ತಮ ಬೀಜವನ್ನು ಬಂಜರುಭೂಮಿಯಲ್ಲಿ ಎಂದೂ ಉತ್ತುವುದಿಲ್ಲವಷ್ಟೆ!

## ಅಧಾರ್ಮಿಕ ಉಪದೇಶ ಹಾನಿಕರ

31 ಅಧರ್ಮೇಣ ಚ ಯಃ ಪ್ರಾಹ ಯಶ್ಚಾಧರ್ಮೇಣ ಪೃಚ್ಛತಿ* ।
ತಯೋರನ್ಯತರಃ ಪ್ರೈತಿ ವಿದ್ವೇಷಂ ವಾಽಧಿಗಚ್ಛತಿ ॥ -II 111

ಧರ್ಮಕ್ಕೆ ವಿರುದ್ಧವಾದ ರೀತಿಯಲ್ಲಿ ಹೇಳುವವನು ಮತ್ತು ಕೇಳುವವನು ಈ ಇಬ್ಬರಲ್ಲಿ ಒಬ್ಬನು ನಾಶವಾಗುತ್ತಾನೆ, ಇಲ್ಲವೇ ಅವರಿಬ್ಬರಲ್ಲಿ ಪರಸ್ಪರ ದ್ವೇಷ ಉಂಟಾಗುತ್ತದೆ.

## ಗುರುವಿನ ಲಕ್ಷಣ

32 ಅಲ್ಪಂ ವಾ ಬಹು ವಾ ಯಸ್ಯ ಶ್ರುತಸ್ಯೋಪಕರೋತಿ ಯಃ ।
ತಮಪೀಹ ಗುರುಂ ವಿದ್ಯಾತ್ ಶ್ರುತೋಪಕ್ರಿಯಯಾ ತಯಾ ॥ -II 149

---

* ಪ್ರಶ್ನದೋಷಾ ಹಿ ಚತ್ವಾರಃ ಸ್ವವ್ಯಾಹತಿರಸಂಗತಿಃ ।
ಸಿದ್ಧಾರ್ಥತಾ ಚ ನೈಷ್ಫಲ್ಯಂ ನ ತೈಃ ಸ್ಯಾತ್ತತ್ತ್ವನಿರ್ಣಯಃ ॥
- ಅನುವ್ಯಾಖ್ಯಾನ (3/2/1)

ಅರ್ಥವನ್ನು ತಿಳಿಸಿಕೊಡುವ ಮೂಲಕ ಶಾಸ್ತ್ರಾಧ್ಯಯನಕ್ಕೆ ಉಪಕಾರ ಮಾಡುವವರೆಲ್ಲ ಗುರುಗಳೆನ್ನಿಸುತ್ತಾರೆ; ಅವರು ಹೇಳುವುದು ಕಡಿಮೆಯೋ ಹೆಚ್ಚೋ ಎಂಬುದು ಮುಖ್ಯವಲ್ಲ, ಎಷ್ಟು ಯಥಾರ್ಥ ಎಂಬುದಷ್ಟೇ ಮುಖ್ಯ

## ಸರಿಯಾದ ಮಾತು ಯಾರಿಂದಲೂ ಗ್ರಾಹ್ಯವೇ

33 ಶ್ರದ್ಧಧಾನಃ ಶುಭಾಂ ವಿದ್ಯಾಮಾದದೀತಾವರಾದಪಿ ।
*ಅಂತ್ಯಾದಪಿ ಪರಂ ಧರ್ಮಂ ಸ್ತ್ರೀರತ್ನಂ ದುಷ್ಕುಲಾದಪಿ ॥ -II 238

ಶ್ರದ್ಧಾಳುವಾದವನು ಶುಭಕರವಾದ ವಿದ್ಯೆಯನ್ನು ತನಗಿಂತ ಕೀಳಾದವನಿಂದಲೂ ಸಹ ಪಡೆಯಬಹುದು. ಉತ್ತಮ ಧರ್ಮವನ್ನು ಶೂದ್ರನಿಂದಾದರೂ ಸರಿಯೇ ಕಲಿತುಕೊಳ್ಳಬೇಕು. ಕುಲ ಕೆಟ್ಟದ್ದಾಗಿದ್ದರೂ ಸರಿಯೇ ಕನ್ಯೆಯು ಉತ್ತಮಳಾಗಿದ್ದಲ್ಲಿ ಅವಳನ್ನು ಸ್ವೀಕರಿಸಬಹುದು

## ಉಪದೇಶದ ರೀತಿಯು ಹೀಗಿರಬೇಕು

34 ಅಹಿಂಸಯೈವ ಭೂತಾನಾಂ ಕಾರ್ಯಂ ಶ್ರೇಯೋಽನುಶಾಸನಮ್ ।
ವಾಕ್ ಚೈವ ಮಧುರಾ ಶ್ಲಕ್ಷ್ಣಾ ಪ್ರಯೋಜ್ಯಾ ಧರ್ಮಮಿಚ್ಛತಾ ॥ -II 159

ಮನಸ್ಸಿಗೆ ನೋವುಂಟಾಗದ ರೀತಿಯಲ್ಲಿ ಪ್ರಾಣಿಗಳಿಗೆ ಹಿತವನ್ನು ಉಪದೇಶಿಸಬೇಕು ತಾನು ಉಪದೇಶಿಸುವ ಧರ್ಮಕಾರ್ಯವು ಸಫಲವಾಗಬೇಕೆಂದು ಬಯಸುವವನು ಮೃದುವೂ ಮಧುರವೂ ಆದ ಮಾತನ್ನೇ ಯಾವಾಗಲೂ ಬಳಸಬೇಕು.

## ಗುರುವಿನ ಅಣಕ ಕೂಡದು

35. ನೋದಾಹರೇದಸ್ಯ ನಾಮ ಪರೋಕ್ಷಮಪಿ ಕೇವಲಮ್ ।
ನ ಚೈವಾಸ್ಯಾನುಕುರ್ವೀತ ಗತಿಭಾಷಿತಚೇಷ್ಟಿತಮ್ ॥ -II 199

---

* ಜ್ಞಾಪನಂ ಕ್ಷತ್ರಿಯಾಣಾಂ ಚ ಧರ್ಮೋ ವಿಪ್ರಾಭ್ಯನುಜ್ಞಯಾ ।
ತದಭಾವೇ ತು ವೈಶ್ಯಾನಾಂ ಶೂದ್ರಸ್ಯ ಪರಮಾಪದಿ ॥
ವರ್ಣೇಷ್ವಜ್ಞೇಷ್ವವರ್ಣಸ್ತು ನ ಜ್ಞಾನೀ ಸ್ಯಾತ್ ಕಥಂಚನ ।
ಇತಿ ಶ್ರುತೇರವರ್ಣಸ್ಯ ಜ್ಞಾಪನಪ್ರಾಪ್ತಿರೇವ ನ ॥
-ಮ ಭಾ.ತಾ ನಿ 29/33,34

[1]ಗುರುಗಳು ಎದುರಿಗೆ ಇಲ್ಲದಿರುವಾಗಲೂ ಕೂಡ, ವಿನಾಕಾರಣ, ಅವರ ಹೆಸರನ್ನು ಹೇಳಕೂಡದು, ಅವರ ನಡೆ, ನುಡಿ, ಮೊದಲಾದುವುಗಳನ್ನು ಅಣಕಿನಕೂಡದು

## ಗುರುಸೇವೆಯ ಮಹತ್ವ

36 ಯಥಾ ಖನನ್ ಖನಿತ್ರೇಣ ನರೋ ವಾರ್ಯಧಿಗಚ್ಛತಿ ।
ತಥಾ ಗುರುಗತಾಂ ವಿದ್ಯಾಂ [2]ಶುಶ್ರೂಷುರಧಿಗಚ್ಛತಿ ॥ II 218

ಮನುಷ್ಯನು ಅಗೆಯುವ ಸಾಧನಗಳ ಮೂಲಕ ಭೂಮಿಯಲ್ಲಿನ ನೀರನ್ನು ಪಡೆದುಕೊಳ್ಳುವಂತೆ, ಶಿಷ್ಯನು ಸೇವೆ ಮಾಡುವುದರ ಮೂಲಕ ಗುರುಗಳಲ್ಲಿಯ ವಿದ್ಯೆಯನ್ನು ಪಡೆದುಕೊಳ್ಳುತ್ತಾನೆ

## ಅಧ್ಯೇತವ್ಯ ಶಾಸ್ತ್ರ

37 ತಪೋವಿಶೇಷೈರ್ವಿವಿಧೈರ್ವ್ರತೈಶ್ಚ ವಿಧಿಚೋದಿತೈಃ ।
ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ಹಿ ದ್ವಿಜನ್ಮನಾ[3] ॥ II 165

ವಿದ್ಯುಕ್ತವಾದ ವಿವಿಧ ರೀತಿಯ ವಿಶೇಷ ತಪಸ್ಸುಗಳನ್ನು, ವ್ರತಗಳನ್ನು ಆಚರಿಸುತ್ತಲೇ ದ್ವಿಜನಾದವನು ಎಲ್ಲಾ ವೇದಗಳನ್ನೂ ಉಪನಿಷತ್ಸಮೇತವಾಗಿ ಅಧ್ಯಯನ ಮಾಡಬೇಕು.

38. ಬುದ್ಧಿವೃದ್ಧಿಕರಾಣ್ಯಾಶು ಧನ್ಯಾನಿ ಚ ಹಿತಾನಿ ಚ ।
ನಿತ್ಯಂ ಶಾಸ್ತ್ರಾಣ್ಯವೇಕ್ಷೇತ ನಿಗಮಾಂಶ್ಚೈವ ವೈದಿಕಾನ್ ॥ -IV 19

ಬುದ್ಧಿಯನ್ನು ಹೆಚ್ಚಿಸತಕ್ಕಂತಹ, ಧನವನ್ನು ತಂದುಕೊಡತಕ್ಕಂತಹ ಹಿತವನ್ನುಂಟು-ಮಾಡತಕ್ಕಂತಹ ವೇದಮೂಲವಾದ ವಿವಿಧ ಶಾಸ್ತ್ರಗಳನ್ನು ಯಾವಾಗಲೂ ಯಥೋಚಿತವಾಗಿ ಅಭ್ಯಾಸ ಮಾಡುತ್ತಿರಬೇಕು.

---

1 ಗುರೋರ್ನಾಮ ನ ಗೃಹ್ಣೀಯಾಚ್ಛ್ರೇಷ್ಠೋ ಭಾರ್ಯಾ ಪತೇರಪಿ ।
-ಬ್ರಹ್ಮಸೂತ್ರಭಾಷ್ಯ (1/1/1)

2 ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
-ಗೀತಾ (4/34)

## ಸ್ನಾತಕನ ಧರ್ಮಗಳು

39 ನ ಸೀದೇತ್ಸ್ನಾತಕೋ ವಿಪ್ರಃ ಕ್ಷುಧಾ ಶಕ್ತಃ ಕಥಂಚನ ।
ನ ಜೀರ್ಣಮಲವದ್ವಾಸಾ ಭವೇಚ್ಚ ವಿಭವೇ ಸತಿ ॥ -IV 34

ಸ್ನಾತಕನಾದ ಬ್ರಾಹ್ಮಣನು ಸಂಪಾದಿಸುವ ಸಾಮರ್ಥ್ಯವಿದ್ದೂ ಹಸಿವೆಯಿಂದ ಬಳಲಕೂಡದು; ಐಶ್ವರ್ಯವಿದ್ದಾಗ ಕೊಳಕಾದ ಅಥವಾ ಹರಿದ ವಸ್ತ್ರಗಳನ್ನು ಧರಿಸಕೂಡದು.

40 ಕ್ಲೃಪ್ತಕೇಶನಖಶ್ಮಶ್ರುರ್ದಾಂತಃ ಶುಕ್ಲಾಂಬರಃ ಶುಚಿಃ ।
ಸ್ವಾಧ್ಯಾಯೇ ಚೈವ ಯುಕ್ತಃ ಸ್ಯಾನ್ನಿತ್ಯಮಾತ್ಮಹಿತೇಷು ಚ ॥ IV 35

ಕೇಶ, ನಖ, ಶ್ಮಶ್ರುಗಳನ್ನು ಕತ್ತರಿಸಿಕೊಂಡು, ಇಂದ್ರಿಯನಿಗ್ರಹವನ್ನು ಹೊಂದಿದವನಾಗಿ ಶುದ್ಧವಾದ ವಸ್ತ್ರಗಳನ್ನು ಧರಿಸಿಕೊಂಡು ಶುಚಿಯಾಗಿರಬೇಕು. ಸದಾ ಸ್ವಾಧ್ಯಾಯದಲ್ಲೂ, ಭಗವತ್ಪ್ರಿಯವಾದ ಕಾರ್ಯಗಳಲ್ಲೂ ನಿರತನಾಗಿರಬೇಕು

## ಅಧ್ಯಯನವು ಸದಾ ಕಾರ್ಯ

41 ಚೋದಿತೋ ಗುರುಣಾ ನಿತ್ಯಮಪ್ರಚೋದಿತ ಏವ ವಾ ।
ಕುರ್ಯಾದಧ್ಯಯನೇ ಯತ್ನಮಾಚಾರ್ಯಸ್ಯ ಹಿತೇಷು ಚ ॥ II 191

ಗುರುಗಳು ಹೇಳಲಿ ಅಥವಾ ಹೇಳದಿರಲಿ ನಿತ್ಯದಲ್ಲೂ ಅಧ್ಯಯನ ಕಾರ್ಯಕ್ಕಾಗಿ ಪ್ರಯತ್ನಿಸುತ್ತಿರಬೇಕು, ಹಾಗೆಯೇ ಗುರುಗಳಿಗೆ ಹಿತವನ್ನೆಸಗುವುದರಲ್ಲೂ ಪ್ರಯತ್ನಶೀಲನಾಗಬೇಕು.

## ಶಾಸ್ತ್ರಾಧ್ಯಯನದ ಫಲ

42 *ಯಥಾ ಯಥಾ ಹಿ ಪುರುಷಃ ಶಾಸ್ತ್ರಂ ಸಮಧಿಗಚ್ಛತಿ ।
ತಥಾ ತಥಾ ವಿಜಾನಾತಿ ವಿಜ್ಞಾನಂ ಚಾಸ್ಯ ರೋಚತೇ ॥ -IV 20

---

* ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ॥
-ಗೀತಾ (4/11)

ಯಥಾ ಯಥಾ ವಿಷ್ಣುಪರಶ್ಚಿದಾತ್ಮಾ ತಥಾ ತಥಾ ಹ್ಯಸ್ಯ ಗತಿಃ ಪರತ್ರ ।
-ಮ.ಭಾ.ತಾ ನಿ (11/173)

ಮನುಷ್ಯನು ಶಾಸ್ತ್ರವನ್ನು ಅರ್ಥಮಾಡಿಕೊಳ್ಳುತ್ತ ಹೋದಂತೆಲ್ಲ, ತಿಳುವಳಿಕೆಯು ಹೆಚ್ಚುತ್ತಾ ಹೋಗುತ್ತದೆ, ವಿಜ್ಞಾನವು ಅವನಿಗೆ ರುಚಿಸಲಾರಂಭಿಸುತ್ತದೆ

43 ಸೇನಾಪತ್ಯಂ ಚ ರಾಜ್ಯಂ ಚ ದಂಡನೇತೃತ್ವಮೇವ ಚ ।
ಸರ್ವಲೋಕಾಧಿಪತ್ಯಂ ಚ ವೇದಶಾಸ್ತ್ರವಿದರ್ಹತಿ[1] ॥ -XII 100

ಸೇನಾಪತ್ಯ, ರಾಜ್ಯಾಡಳಿತ, ದಂಡಾಧಿಕಾರ, ಸರ್ವಲೋಕಗಳ ಒಡೆತನ ಇವೆಲ್ಲಕ್ಕೂ ವೇದ ತಿಳಿದವನು ಅರ್ಹನೆನ್ನಿಸುತ್ತಾನೆ.

## ಶಾಸ್ತ್ರಾಧ್ಯಯನದ ಫಲಕ್ಕೆ ಅಧಿಕಾರಿ

44 ಯಸ್ಯ ವಾಙ್ಮನಸೀ ಶುದ್ಧೇ ಸಮ್ಯಗ್ಗುಪ್ತೇ ಚ ಸರ್ವದಾ ।
ಸ ವೈ ಸರ್ವಮವಾಪ್ನೋತಿ ವೇದಾಂತೋಪಗತಂ ಫಲಂ ॥ II 160

ಮಾತು ಮತ್ತು ಮನಸ್ಸುಗಳನ್ನು ಸರ್ವದಾ ಶುದ್ಧವನ್ನಾಗಿಯೂ, ತನ್ನ ವಶವರ್ತಿಗಳನ್ನಾಗಿಯೂ ಇರಿಸಿಕೊಂಡವನು ವೇದಾಂತದಲ್ಲಿ ಹೇಳಲ್ಪಟ್ಟ ಫಲವನ್ನೆಲ್ಲ ಪಡೆಯುತ್ತಾನೆ

## ಸ್ವವಿಹಿತಕರ್ಮವು ಸದಾ ಕರ್ತವ್ಯ

45 ವೇದೋದಿತಂ ಸ್ವಕಂ ಕರ್ಮ ನಿತ್ಯಂ ಕುರ್ಯಾದತಂದ್ರಿತಃ ।
ತದ್ಧಿ ಕುರ್ವನ್ ಯಥಾಶಕ್ತಿ ಪ್ರಾಪ್ನೋತಿ ಪರಮಾಂ ಗತಿಮ್[2] ॥ -IV 14

ವೇದೋಕ್ತವಾದ ತನ್ನ ಪಾಲಿನ ಕರ್ತವ್ಯವನ್ನು ಆಲಸ್ಯವಿಲ್ಲದೆ ನಿತ್ಯದಲ್ಲೂ ಆಚರಿಸಬೇಕು. ಸ್ವಕರ್ಮವನ್ನು ತನ್ನ ಶಕ್ತ್ಯನುಸಾರವಾಗಿ ಆಚರಿಸುವುದರ ಮೂಲಕ ಮನುಷ್ಯನು ಶ್ರೇಷ್ಠವಾದ ಗತಿಯನ್ನು ಪಡೆಯುತ್ತಾನೆ.

---

1 ಸ್ವೀಯಂ ವೇದವಿದಾಂ ಸರ್ವಮ್ । -ಮ. ಭಾ. ತಾ ನಿ (23/6)

2 ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ । -ಗೀತಾ (18/45)
ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ । -ಗೀತಾ (2/47)

## ಹಿರಿಯರನ್ನು ಗೌರವಿಸಬೇಕು

46 ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।
ಚತ್ವಾರಿ ತಸ್ಯ ವರ್ಧಂತೇ ಆಯುರ್ವಿದ್ಯಾಯಶೋ ಬಲಮ್ ॥ II 121

ನಿತ್ಯದಲ್ಲೂ ಹಿರಿಯರನ್ನು ನಮಸ್ಕರಿಸಿ ಆದರಿಸುವವನ ಆಯುಷ್ಯ, ವಿದ್ಯೆ, ಯಶಸ್ಸು ಮತ್ತು ಬಲ ಈ ನಾಲ್ಕೂ ಹೆಚ್ಚುತ್ತಾ ಹೋಗುತ್ತವೆ.

## ವಯಸ್ಸು ಮೊದಲಾದುವುಗಳು ಹಿರಿಮೆಗೆ ಕಾರಣಗಳಲ್ಲ

47 ನ ಹಾಯನೈರ್ನ ಪಲಿತೈರ್ನ ವಿತ್ತೇನ ನ ಬಂಧುಭಿಃ ।
ಋಷಯಶ್ಚಕ್ರಿರೇ ಧರ್ಮಂ ಯೋಽನೂಚಾನಃ ಸ ನೋ ಮಹಾನ್ ॥-II 154

ಬಾಳಿದ ವರ್ಷಗಳಿಂದಾಗಲೀ, ಬಿಳುಪಾದ ತಲೆಗೂದಲುಗಳಿಂದಾಗಲೀ ಸಂಪಾದಿಸಿದ ಐಶ್ವರ್ಯದಿಂದಾಗಲೀ, ಬಂಧುತ್ವದ ನಿಮಿತ್ತದಿಂದಾಗಲೀ, ಒಬ್ಬ ವ್ಯಕ್ತಿಯು ಮನ್ನಣೆಗೆ ಅರ್ಹನಾಗುವನೆಂದು ಋಷಿಗಳು ಭಾವಿಸಲಿಲ್ಲ; ಅಧ್ಯಯನಶೀಲನೇ ಪೂಜ್ಯನೆಂಬುದು ಅವರ ಮತ.

## ವೃದ್ಧನ ಲಕ್ಷಣ

48 ನ ತೇನ ವೃದ್ಧೋ ಭವತಿ ಯೇನಾಸ್ಯ ಪಲಿತಂ ಶಿರಃ ।
ಯೋ ವೈ ಯುವಾಽಪ್ಯಧೀಯಾನಸ್ತಂ ದೇವಾಃ ಸ್ಥವಿರಂ ವಿದುಃ ॥ -II 156

ತಲೆಗೂದಲುಗಳು ಬೆಳ್ಳಗಾಗುವ ಕಾರಣದಿಂದ ಒಬ್ಬ ವ್ಯಕ್ತಿ ಹಿರಿಯನೆನ್ನಿಸಲಾರನು, ಯುವಕನಾಗಿದ್ದರೂ ಕೂಡ ಶಾಸ್ತ್ರಜ್ಞಾನಿಯಾದವನನ್ನು 'ವೃದ್ಧ'ನೆಂದೇ ದೇವತಗಳು ತಿಳಿಯುತ್ತಾರೆ.

## ಪೂಜ್ಯಸ್ಥಾನಗಳು

49. *ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರಿಯೋ ಹ್ಯುತ್ತರೋತ್ತರಮ್ ॥ -II 136

---

*ಇದು ಶ್ರೀಮದಾಚಾರ್ಯರಿಂದ ಗೀತಾಭಾಷ್ಯ (6/9) ಮತ್ತು ಕೃಷ್ಣಾಮೃತ ಮಹಾರ್ಣವ (219)ಗಳಲ್ಲಿ ಉದಾಹೃತ.

ಐಶ್ವರ್ಯ, ಬಂಧುತ್ವ, ವಯಸ್ಸು, ಕರ್ಮಾನುಷ್ಠಾನ (ಅಧಿಕಾರ) ಮತ್ತು ವಿದ್ಯೆ ಈ ಐದೂ ಒಬ್ಬ ವ್ಯಕ್ತಿಯ ಪೂಜ್ಯತೆಯನ್ನು ನಿರ್ಧರಿಸುತ್ತವೆ ಇವುಗಳಲ್ಲಿ ಕ್ರಮವಾಗಿ ಮೊದಲನೆಯದಕ್ಕಿಂತ ಅನಂತರದ್ದು ಹೆಚ್ಚು ಶ್ರೇಷ್ಠವೆನ್ನಿಸುತ್ತದೆ.

## ತಂದೆ, ತಾಯಿ, ಗುರು ಈ ಮೂವರೂ ಪೂಜ್ಯರು

50 [1]ಇಮಂ ಲೋಕಂ ಮಾತೃಭಕ್ತ್ಯಾ ಪಿತೃಭಕ್ತ್ಯಾ ತು ಮಧ್ಯಮಮ್ ।
ಗುರುಶುಶ್ರೂಷಯಾ ತ್ವೇವಂ ಬ್ರಹ್ಮಲೋಕಂ ಸಮಶ್ನುತೇ ॥ -II 233

ಮಾತೃಭಕ್ತಿಯಿಂದ ಇಹಲೋಕವೂ, ಪಿತೃಭಕ್ತಿಯಿಂದ ಮಧ್ಯಮ ಲೋಕವೂ ಮತ್ತು ಗುರುಭಕ್ತಿಯಿಂದ ಬ್ರಹ್ಮಲೋಕವೂ ಲಭಿಸುತ್ತವೆ.

51 ಸರ್ವೇ ತಸ್ಯಾದೃತಾ ಧರ್ಮಾ ಯಸ್ಯೈತೇ ತ್ರಯ ಆದೃತಾಃ ।
ಅನಾದೃತಾಸ್ತು ಯಸ್ಯೈತೇ ಸರ್ವಾಸ್ತಸ್ಯಾಫಲಾಃ ಕ್ರಿಯಾಃ ॥ -II 234

ಈ ಮೂವರನ್ನು ಆದರಿಸುವವನು ಎಲ್ಲಾ ಧರ್ಮಗಳನ್ನೂ ಆದರಿಸಿದಂತೆಯೇ ಸರಿ, ಇವರನ್ನು ಆದರಿಸುವವನ ಎಲ್ಲಾ ಕಾರ್ಯಗಳೂ ಸಹ ನಿಷ್ಫಲವೆನ್ನಿಸುತ್ತವೆ [2]

## ಅನ್ನವನ್ನು ಗೌರವದಿಂದ ಕಾಣಬೇಕು

52 ಪೂಜಯೇದಶನಂ ನಿತ್ಯಮದ್ಯಾಚ್ಚೈತದಕುತ್ಸಯನ್ ।
ದೃಷ್ಟ್ವಾ ಹೃಷ್ಯೇತ್ಪ್ರಸೀದೇಚ್ಚ ಪ್ರತಿನಂದೇಚ್ಚ ಸರ್ವಶಃ ॥ -II 54

ಅನ್ನವನ್ನು ನಿತ್ಯದಲ್ಲೂ ಪೂಜಿಸಬೇಕು; ನಿಂದಿಸದೆ ಅದನ್ನು ಭೋಜನ ಮಾಡಬೇಕು; ಅನ್ನವನ್ನು ಕಂಡು ಸಂತೋಷಪಡಬೇಕು, ಮನಸ್ಸಿನಲ್ಲಿ ಪ್ರಸನ್ನತೆಯನ್ನು ಹೊಂದಬೇಕು, ಅಭಿನಂದಿಸಬೇಕು

---

1 ಮಾತೃದೇವೋ ಭವ । ಪಿತೃದೇವೋ ಭವ । ಆಚಾರ್ಯದೇವೋ ಭವ ।
-ತೈತ್ತಿರೀಯೋಪನಿಷತ್

2 ನ ಸಂತಿ ಹಿ ಬ್ರಹ್ಮಹಣಾಂ ಹಿ ಲೋಕಾಃ
ವಿಶೇಷತಶ್ಚೈವ ಗುರುದ್ರುಹಾಂ ಪುನಃ ॥ -ಮ. ಭಾ ಶಾ ನಿ (28/141)

53 ಪೂಜಿತಂ ಹ್ಯಶನಂ ನಿತ್ಯಂ ಬಲಮೂರ್ಜಂ ಚ ಯಚ್ಛತಿ ।
ಅಪೂಜಿತಂ ಚ ತದ್ಭುಕ್ತಮುಭಯಂ ನಾಶಯೇದಿದಂ ॥ -II 55

ಆದರಿಸಲ್ಪಡುವ ಅನ್ನವು ನಿತ್ಯವೂ ಬಲ ಹಾಗೂ ವರ್ಚಸ್ಸುಗಳನ್ನು ತಂದುಕೊಡುತ್ತದೆ. ಹೀನಾಯವಾಗಿ ಕಂಡು ತಿನ್ನಲ್ಪಟ್ಟ ಅನ್ನವು ಆ ಎರಡನ್ನೂ ನಾಶವಡಿಸುತ್ತದೆ.

## ಅತಿಭೋಜನವು ಹಾನಿಕರ

54. ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿಭೋಜನಮ್ ।
ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ಪರಿವರ್ಜಯೇತ್ ॥ -II 57

ಮಿತಿಮೀರಿದ ಭೋಜನವು ಆರೋಗ್ಯಕ್ಕೆ ಹಾನಿಕರ; ಅದು ಆಯುಷ್ಯವನ್ನು ಕಡಿಮೆ ಮಾಡುತ್ತದೆ; ಸ್ವರ್ಗಸಾಧನೆಗೂ ಅಡ್ಡಿಯಾಗುತ್ತದೆ. ಪುಣ್ಯಕರವೂ ಅಲ್ಲ; ಜನರೂ ಹೀಯಾಳಿಸುತ್ತಾರೆ. ಆದ್ದರಿಂದ ಎಂದೂ ಅತಿಯಾಗಿ ತಿನ್ನಬಾರದು.

## ಅತಿಥಿಗಳನ್ನು ಆದರಿಸಬೇಕು

55 ಸಂಪ್ರಾಪ್ತಾಯಾತ್ವತಿಥಯೇ ಪ್ರದದ್ಯಾದಾಸನೋದಕೇ ।
ಅನ್ನಂ ಚೈವ ಯಥಾಶಕ್ತಿ ಸತ್ಕೃತ್ಯ ವಿಧಿಪೂರ್ವಕಮ್ ॥ -III 99

ಮನೆಗೆ ಆಗಮಿಸಿದ* ಅತಿಥಿಯನ್ನು ವಿಧಿಪೂರ್ವಕವಾಗಿ ಆದರಿಸಿ, ಯಥಾಶಕ್ತಿ ಆಸನವನ್ನು, ನೀರನ್ನು, ಆಹಾರವನ್ನು ಸಮರ್ಪಿಸಬೇಕು.

## ಸಜ್ಜನರ ಮನೆಯಲ್ಲಿ ಸದಾ ದೊರೆಯುವ ವಸ್ತುಗಳು

56. ತೃಣಾನಿ ಭೂಮಿರುದಕಂ ವಾಕ್ ಚತುರ್ಥೀ ಚ ಸೂನೃತಾ ।
ಏತಾನ್ಯಪಿ ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ ॥ -III 101

ಹುಲ್ಲು (ಚಾಪೆ), ಭೂಮಿ, ನೀರು ಮತ್ತು ಒಳ್ಳೆಯ ಮಾತು; ಈ ನಾಲ್ಕೂ ಸಜ್ಜನರ ಮನೆಯಲ್ಲಿ ಎಂದೂ ಇಲ್ಲವೆನ್ನಿಸುವುದಿಲ್ಲ.

---

* ಅತಿಥಿದೇವೋ ಭವ । -ತೈತ್ತಿರೀಯೋಪನಿಷತ್

## ಅತಿಥಿಪೂಜೆಯ ಮಹತ್ತ್ವ

57 *ನ ವೈ ಸ್ವಯಂ ತದಶ್ನೀಯಾದತಿಥಿಂ ಯನ್ನ ಭೋಜಯೇತ್ ।
ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ವಾಽತಿಥಿಪೂಜನಮ್ ॥ -III 106

ಅತಿಥಿಗೆ ಕೊಡದ ಯಾವುದನ್ನೂ ತಾನು ತಿನ್ನಕೂಡದು; ಅತಿಥಿ ಪೂಜೆಯು ಜೀವನದ ಸಾರ್ಥಕ್ಯಕ್ಕೂ, ಆಯುರ್ವೃದ್ಧಿಗೂ, ಕೀರ್ತಿಗೂ ಸ್ವರ್ಗಕ್ಕೂ ಕಾರಣವಾಗುತ್ತದೆ.

## ಆದರವಿಲ್ಲದ ಸ್ಥಳದಲ್ಲಿ ಆತಿಥ್ಯ ಸ್ವೀಕರಿಸಬಾರದು

58 ಆಸನಾಶನಶಯ್ಯಾಭಿರದ್ಭಿರ್ಮೂಲಫಲೇನ ಚ ।
ನಾಸ್ಯ ಕಶ್ಚಿದ್ವಸೇದ್ಗೇಹೇ ಶಕ್ತಿತೋಽನರ್ಚಿತೋಽತಿಥಿಃ ॥ -IV 29

ತಮ್ಮ ಶಕ್ತ್ಯನುಸಾರವಾಗಿ ಆಸನ, ಅಶನ, ಶಯ್ಯೆ, ನೀರು, ಗಡ್ಡೆಗೆಣಸುಗಳು, ಹಣ್ಣುಗಳು ಇವುಗಳಿಂದ ಆದರಿಸದವರ ಮನೆಯಲ್ಲಿ ಅತಿಥಿಯು ನೆಲೆಕೂಡದು.

## ಆತಿಥ್ಯಕ್ಕೆ ಅನರ್ಹರು

59. ಪಾಷಂಡಿನೋ ವಿಕರ್ಮಸ್ಥಾನ್ ಬೈಡಾಲವ್ರತಿಕಾನ್ ಶಠಾನ್ ।
ಹೈತುಕಾನ್ ಬಕವೃತ್ತೀಂಶ್ಚ ವಾಙ್ಮಾತ್ರೇಣಾಪಿ ನಾರ್ಚಯೇತ್ ॥ -IV 30

ಪಾಷಂಡಿಗಳು, ನಿಷಿದ್ಧಕರ್ಮನಿರತರು, ಬಿಡಾಲ ವೃತ್ತಿಗಳು, ಶಠರು, ಹೈತುಕರು, ಬಕವೃತ್ತಿಯವರು ಇವರನ್ನು ಮಾತಿನಿಂದಲೂ ಆದರಿಸಕೂಡದು.

## ಪರಪಾಕವು ನಿಷಿದ್ಧ

60 *ಉಪಾಸತೇ ಯೇ ಗೃಹಸ್ಥಾಃ ಪರಪಾಕಮಬುದ್ಧಯಃ ।
ತೇನ ತೇ ಪ್ರೇತ್ಯ ಪಶುತಾಂ ವ್ರಜಂತ್ಯನ್ನಾದಿದಾಯಿನಾಂ ॥ -III 104

---

* ಸಂಪ್ರೀತಿಭೋಜ್ಯಾನ್ಯನ್ನಾನಿ । -(ಮಹಾಭಾರತ)
* ಪರಪಾಕೋ ಗೃಹಸ್ಥಸ್ಯ ಕ್ಷತ್ರಿಯಸ್ಯ ವಿಶೇಷತಃ-ನ ಯೋಗ್ಯಃ ।
-ಮ. ಭಾ. ತಾ. ನಿ (23/4)

ಮತ್ತೊಬ್ಬರ ಮನೆಯ ಅನ್ನಕ್ಕಾಗಿ ಹಾತೊರೆಯುವ ಅವಿವೇಕಿ ಗೃಹಸ್ಥರು ಮರಣಾನಂತರ ಅನ್ನಾದಿಗಳನ್ನು ಕೊಟ್ಟವರ ಮನೆಯಲ್ಲಿ ಪಶು ಪಕ್ಷಿಗಳಾಗಿ ಜನಿಸುತ್ತಾರೆ.

## ಧರ್ಮವಿರುದ್ಧವಾದ ಅರ್ಥ ಕಾಮಗಳು ತ್ಯಾಜ್ಯ

61 ಪರಿತ್ಯಜೇದರ್ಥಕಾಮೌ ಯೌ ಸ್ಯಾತಾಂ ಧರ್ಮವರ್ಜಿತೌ ।
ಧರ್ಮಂ ಚಾಪ್ಯಸುಖೋದರ್ಕಂ ಲೋಕವಿಕ್ರುಷ್ಟಮೇವ ಚ ॥ IV 176

ಧರ್ಮವಿರುದ್ಧವಾದ ಆಶೆ ಹಾಗೂ ಐಶ್ವರ್ಯ ಏನೇ ಇದ್ದರೂ ಅದನ್ನು ತ್ಯಜಿಸಬೇಕು. ದುಃಖದಿಂದ ಯುಕ್ತವೂ ಲೋಕಪೀಡಕವಾದವೂ ಆದ (ಧರ್ಮದಂತೆ ತೋರುವ) ಕೆಲಸವನ್ನು ಎಂದೂ ಮಾಡಕೂಡದು.

## ಅನ್ಯಾಯಕ್ಕೆ ಕೇಡು ತಪ್ಪಿದ್ದಲ್ಲ

62 ನಾಧರ್ಮಶ್ಚರಿತೋ ಲೋಕೇ ಸದ್ಯಃ ಫಲತಿ ಗೌರಿವ* ।
ಶನೈರಾವರ್ತಮಾನಸ್ತು ಕರ್ತುರ್ಮೂಲಾನಿ ಕೃಂತತಿ ॥ -IV 172

ಭೂಮಿಯು ಉತ್ತ ತಕ್ಷಣ ಫಲ ಕೊಡುವುದಿಲ್ಲ; ಅದೇ ರೀತಿ ಅಧರ್ಮವೂ ನಹ ಆಚರಿಸಲ್ಪಟ್ಟ ತಕ್ಷಣ ಕೆಡುಕನ್ನುಂಟುಮಾಡುವುದಿಲ್ಲ. ಮಾಡುತ್ತಾ ಹೋದಂತೆಲ್ಲ ಅದು ಆಚರಿಸಿದವನನ್ನು ಬುಡಸಮೇತವಾಗಿ ಕತ್ತರಿಸಿ ಹಾಕುತ್ತದೆ.

63 ಯದಿ ನಾತ್ಮನಿ ಪುತ್ರೇಷು ನ ಚೇತ್ ಪುತ್ರೇಷು ನಪ್ತೃಷು ।
ನ ತ್ವೇವ ಕೃತೋಽಧರ್ಮಃ ಕರ್ತುರ್ಭವತಿ ನಿಷ್ಫಲಃ ॥ -IV 173

---

* ಕೃತೇ ತತ್ಕ್ಷಣಿಕಃ ಶಾಪಸ್ತ್ರೇತಾಯಾಂ ದಶಭಿರ್ದಿನೈಃ-
ದ್ವಾಪರೇ ಚೈಕಮಾಸೇನ ಕಲೌ ಸಂವತ್ಸರೇಣ ತು ॥
ಯತ್ಕೃತೇ ದಶಭಿರ್ವರ್ಷೈಸ್ತ್ರೇತಾಯಾಂ ಹಾಯನೇನ ತು ।
ದ್ವಾಪರೇ ತಚ್ಚ ಮಾಸೇನ ಹ್ಯಹೋರಾತ್ರೇಣ ತತ್ಕಲೌ ॥
-ವಿಷ್ಣುಪುರಾಣ

ತನ್ನಲ್ಲದಿದ್ದರೆ ತನ್ನ ಮಕ್ಕಳನ್ನು, ಮಕ್ಕಳನ್ನಲ್ಲದಿದ್ದರೆ ಮೊಮ್ಮಕ್ಕಳನ್ನಾದರೂ ತಾನು ಮಾಡಿದ ಅಧರ್ಮವು ಹಾಳುಮಾಡುತ್ತದೆ ಅಂತೂ ಅಧರ್ಮವು ಎಂದೂ ಕೆಡುಕನ್ನುಂಟುಮಾಡದೇ ಬಿಡುವುದೇ ಇಲ್ಲ

64 ಅಧರ್ಮೇಣೈಧತೇ ತಾವತ್ತತೋ ಭದ್ರಾಣಿ ಪಶ್ಯತಿ ।
ತತಃ ಸಪತ್ನಾನ್ ಜಯತಿ ಸಮೂಲಸ್ತು ವಿನಶ್ಯತಿ ॥ -IV 174

ಆರಂಭದಲ್ಲಿ ಅಧರ್ಮದಿಂದ ಅಭಿವೃದ್ಧಿ ಕಾಣಬಹುದು, ಒಂದೆರಡು ಸತ್ಫಲಗಳೂ ಗೋಚರಿಸಬಹುದು, ಶತ್ರುಗಳನ್ನೂ ತಲೆಬಾಗಿಸುವಂತೆಯೂ ಮಾಡಬಹುದು; ಆದರೆ ಕೊನೆಗೆ ಸಮೂಲ ನಾಶವು ಮಾತ್ರ ತಪ್ಪಿದ್ದಲ್ಲ.

## ಅಧರ್ಮದ ನಿಂದೆ

65. ಅಧಾರ್ಮಿಕೋ ನರೋ ಯಸ್ತು ಯಸ್ಯ ಚಾಪ್ಯನೃತಂ ಧನಮ್ ।
ಹಿಂಸಾರತಶ್ಚ ಯೋ ನಿತ್ಯಂ ನೇಹಾಸೌ ಸುಖಮೇಧತೇ ॥ -IV 170

ಅಧಾರ್ಮಿಕರು, ಅನ್ಯಾಯದಿಂದ ಸಂಪಾದಿಸಿದ ಹಣವನ್ನು ಹೊಂದಿರುವವರು ಮತ್ತು ಹಿಂಸಾಶೀಲರು ಆದ ಜನರು ಎಂದೂ ಸಹ ಸುಖಿಗಳಾಗುವುದಿಲ್ಲ

## ಎಂದೂ ಅಧರ್ಮದಲ್ಲಿ ಹೆಜ್ಜೆ ಹಾಕುವುದು ಬೇಡ

66. ನ ಸೀದನ್ನಪಿ ಧರ್ಮೇಣ ಮನೋಽಧರ್ಮೇ ನಿವೇಶಯೇತ್ ।
ಅಧಾರ್ಮಿಕಾಣಾಂ ಪಾಪಾನಾಮಾಶು ಪಶ್ಯನ್ ವಿಪರ್ಯಯಮ್ ॥ IV 171

ಅಧರ್ಮನಿರತರಾದ ಪಾಪಿಗಳಿಗೆ ಬಹುಬೇಗ ಕೆಡುಕುಂಟಾಗುವುದು ಎಂದಿಗೂ ತಪ್ಪಿದ್ದಲ್ಲ ಎಂಬುದನ್ನು ಗಮನಿಸಿ, ಧರ್ಮವನ್ನು ಆಚರಿಸುವಾಗ ತೊಂದರೆ ಬಂದರೂ ಚಿಂತೆಯಿಲ್ಲ, ಅಧರ್ಮದಲ್ಲಿ ಮಾತ್ರ ಮನಸ್ಸನ್ನು ಎಂದೂ ಹಾಕಕೂಡದು.

## ಸುಖದುಃಖಗಳ ಮೂಲ

67. ಅಧರ್ಮಪ್ರಭವಂ ಚೈವ ದುಃಖಯೋಗಂ ಶರೀರಿಣಾಮ್ ।
ಧರ್ಮಾರ್ಥಪ್ರಭವಂ ಚೈವ ಸುಖಸಂಯೋಗಮಕ್ಷಯಮ್ ॥ -VI 64

ಶರೀರಿಗಳಿಗೆ ದುಃಖ ಉಂಟಾಗುವುದು ಅಧರ್ಮಾಚರಣೆಯಿಂದ, ಶಾಶ್ವತವಾದ ಸುಖ ದೊರೆಯುವುದುಧರ್ಮವೆಂಬ ಪುರುಷಾರ್ಥದಲ್ಲಿ ನಿರತರಾಗುವುದರಿಂದ ಮಾತ್ರ.

## ಪಂಚಮಹಾಯಜ್ಞಗಳು

68 ಋಷಿಯಜ್ಞಂ ದೇವಯಜ್ಞಂ ಭೂತಯಜ್ಞಂ ಚ ಸರ್ವದಾ ।
ನೃಯಜ್ಞಂ ಪಿತೃಯಜ್ಞಂ ಚ ಯಥಾಶಕ್ತಿ ನ ಹಾಪಯೇತ್ ॥ IV 21

ಋಷಿಯಜ್ಞ, ದೇವಯಜ್ಞ, ಭೂತಯಜ್ಞ, ಮನುಷ್ಯಯಜ್ಞ ಮತ್ತು ಪಿತೃಯಜ್ಞ ಇವುಗಳನ್ನು ಯಥಾಶಕ್ತಿ ತಪ್ಪದೇ ಆಚರಿಸಬೇಕು.

## ಕೇವಲ ಸ್ವಾರ್ಥಕ್ಕಾಗಿ ಅಡಿಗೆ ಮಾಡುವುದು ಪಾಪಕರ*

69 ಅಘಂ ಸ ಕೇವಲಂ ಭುಂಕ್ತೇ ಯಃ ಪಚತ್ಯಾತ್ಮಕಾರಣಾತ್ ।
ಯಜ್ಞಶಿಷ್ಟಾಶನಂ ಹ್ಯೇತತ್ ಸತಾಮನ್ನಂ ವಿಧೀಯತೇ ॥ -III 118

ತನಗೆಂದು ಮಾತ್ರವೇ ಅಡಿಗೆ ಮಾಡಿಕೊಳ್ಳುವವನು ಬರೀ ಪಾಪವನ್ನೇ ಅನ್ನ ರೂಪದಲ್ಲಿ ಭಕ್ಷಿಸುತ್ತಾನೆ. ಯಜ್ಞಗಳನ್ನು ಮಾಡಿಯಾದ ಮೇಲೆ ಉಳಿಯುವ ಆಹಾರವೇ ಸಜ್ಜನರಿಗೆ ವಿಹಿತವಾದ ಆಹಾರ

## ಇವರಿಗೆಲ್ಲ ಮುಂಚಿತವಾಗಿಯೇ ಭೋಜನ ಮಾಡಿಸಬಹುದು.

70 ಸುವಾಸಿನೀಃ ಕುಮಾರೀಶ್ಚ ರೋಗಿಣೋ ಗರ್ಭಿಣೀಃ ಸ್ತ್ರಿಯಃ ।
ಅತಿಥಿಭ್ಯೋಽಗ್ರ ಏವೈತಾನ್ ಭೋಜಯೇದವಿಚಾರಯನ್ ॥ -III 114

ಸುವಾಸಿನಿಯರು, ಕುಮಾರಿಯರು, ರೋಗಿಗಳು, ಮತ್ತು ಗರ್ಭಿಣೀ ಸ್ತ್ರೀಯರು ಇವರುಗಳಿಗೆ ಅತಿಥಿಗಳಿಗಿಂತಲೂ ಮುಂಚಿತವಾಗಿಯೇ ಭೋಜನ ಮಾಡಿಸಬಹುದು; ಧರ್ಮಲೋಪವಾದೀತೆಂಬ ಅಂಜಿಕೆಯನ್ನು ಹೊಂದಬೇಕಿಲ್ಲ

---

* ಕೇವಲಾಘೋ ಭವತಿ ಕೇವಲಾದೀ ॥ - ಶ್ರುತಿಃ
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ।
- ಗೀತಾ (3/13)

## ದಂಪತಿಗಳ ಭೋಜನ ಕಾಲ

71 ಭುಕ್ತವತ್ಸ್ವಥ ವಿಪ್ರೇಷು ಸ್ವೇಷು ಭೃತ್ಯೇಷು ಚೈವ ಹಿ ।
[1]ಭುಂಜೀಯಾತಾಂ ತತಃ ಪಶ್ಚಾದವಶಿಷ್ಟಂ ತು ದಂಪತೀ ॥ -III 116

ವಿಪ್ರರು ಹಾಗೂ ಭೃತ್ಯರು ತಮ್ಮ ಭೋಜನವನ್ನು ಪೂರೈಸಿಯಾದ ಮೇಲೆ ಉಳಿದದ್ದನ್ನು ದಂಪತಿಗಳು ಉಣ್ಣಬೇಕು.

72 ದೇವಾನ್ ಋಷೀನ್ ಮನುಷ್ಯಾಂಶ್ಚ ಪಿತೄನ್ ಗೃಹ್ಯಾಶ್ಚ ದೇವತಾಃ ।
ಪೂಜಯಿತ್ವಾ ತತಃ ಪಶ್ಚಾದ್ಗೃಹಸ್ಥಃ ಶೇಷಭುಗ್ಭವೇತ್ ॥ -III 117

ದೇವತೆಗಳು, ಋಷಿಗಳು, ಮನುಷ್ಯರು, ಪಿತೃಗಳು, ಗೃಹ್ಯದೇವತೆಗಳು ಇವರನ್ನೆಲ್ಲ ಪೂಜಿಸಿಯಾದ ಮೇಲೆ ಗೃಹಸ್ಥರು ಉಳಿದದ್ದನ್ನು ತಾವು ತಿನ್ನಬೇಕು[2]

## ಜ್ಞಾನಿಯನ್ನೇ ಹವ್ಯಕವ್ಯಗಳಿಗೆ ಆಹ್ವಾನಿಸಬೇಕು

73. ಜ್ಞಾನೋತ್ಕೃಷ್ಟಾಯ ದೇಯಾನಿ ಕವ್ಯಾನಿ ಚ ಹವೀಂಷಿ ಚ ।
ನ ಹಿ ಹಸ್ತಾವಸೃಗ್ದಿಗ್ಧೌ ರುಧಿರೇಣೈವ ಶುದ್ಧ್ಯತಃ ॥ -III 132

ಹವ್ಯಕವ್ಯಗಳನ್ನೆಲ್ಲ ಜ್ಞಾನದಲ್ಲಿ ಹಿರಿಯನಾದವನಿಗೆ ಸಮರ್ಪಿಸಬೇಕು, ರಕ್ತಮೆತ್ತಿದ ಕೈಗಳನ್ನು ರಕ್ತದಿಂದಲೇ ತೊಳೆದುಕೊಂಡರೆ ಶುದ್ಧವಾಗುವುದಿಲ್ಲವಷ್ಟೆ!

## ಉಚಿತವಾದ ರೀತಿಯಲ್ಲಿ ವರ್ತಿಸಬೇಕು

74 ವಯಸಃ ಕರ್ಮಣೋಽರ್ಥಸ್ಯ ಶ್ರುತಸ್ಯಾಭಿಜನಸ್ಯ ಚ ।
ವೇಷವಾಗ್ಬುದ್ಧಿಸಾರೂಪ್ಯಮಾಚರನ್ ವಿಚರೇದಿಹ ॥ -IV 18

---

[1] ಭುಕ್ತಶೇಷಂ ಭಗವತೋ ಭೃತ್ಯಾತಿಥಿಪುರಃಸರಃ ।
ಭುಂಜೀತ ಹೃದ್ಗತಂ ವಿಷ್ಣುಂ ಸ್ಮರಂಸ್ತದ್ಗತಮಾನಸಃ ॥
-ಸದಾಚಾರಸ್ಮೃತಿ

[2] ಊಷುರ್ವನೇ ಚ ತೇ ಪಾರ್ಥಾ ಮುನಿಶೇಷಾನ್ನಭೋಜಿನಃ-
-ಮ ಭಾ ಶಾ ನಿ. (22/61)

ತನ್ನ ವಯಸ್ಸು, ಕೆಲಸ, ಅರ್ಥ, ಅಧ್ಯಯನ, ಮತ್ತು ವಂಶ ಇವುಗಳಿಗೆ ಉಚಿತವೆನ್ನಿಸುವ ಉಡಿಗೆ ತೊಡಿಗೆಗಳು, ಮತ್ತು ಮಾತು, ಬುದ್ಧಿಗಳನ್ನು ಅಳವಡಿಸಿಕೊಂಡು ಬದುಕಬೇಕು.

## ಉಷಃಕಾಲದ ಕಾರ್ಯಗಳು

75 ಬ್ರಾಹ್ಮೇ ಮುಹೂರ್ತೇ ಬುದ್ಧ್ಯೇತ ಧರ್ಮಾರ್ಥೌ ಚಾನುಚಿಂತಯೇತ್ ।
ಕಾಯಕ್ಲೇಶಾಂಶ್ಚ ತನ್ಮೂಲಾನ್ ವೇದತತ್ತ್ವಾರ್ಥಮೇವ ಚ ॥ -IV 92

ಬ್ರಾಹ್ಮ ಮುಹೂರ್ತದಲ್ಲಿಯೇ ಏಳಬೇಕು, ತಾನು ಆ ದಿನ ಮಾಡಬೇಕಾದ ಧರ್ಮಕಾರ್ಯಗಳನ್ನು, ಧನಸಂಪಾದನೆಯ ಕಾರ್ಯಗಳನ್ನು ಕುರಿತು ವಿಚಾರ ಮಾಡಬೇಕು; ಅದರಿಂದ ಉಂಟಾಗಬಹುದಾದ ಶರೀರ ಶ್ರಮವನ್ನೂ ಗಮನಿಸಬೇಕು; ವೇದಗಳ ಅರ್ಥವನ್ನು ಸಹ ಮನನ ಮಾಡಬೇಕು.

## ಪೂರ್ವಾಹ್ಣದ ಕೃತ್ಯಗಳು

76. ಮೈತ್ರಂ ಪ್ರಸಾಧನಂ ಸ್ನಾನಂ ದಂತಧಾವನಮಂಜನಮ್ ।
ಪೂರ್ವಾಹ್ಣ ಏವ ಕುರ್ವೀತ ದೇವತಾನಾಂ ಚ ಪೂಜನಮ್ ॥ -IV 152

ಶೌಚ, ಅಲಂಕಾರ, ಸ್ನಾನ, ದಂತಧಾವನ, ಅಭ್ಯಂಗ ಮತ್ತು ದೇವತಾ ಪೂಜೆ ಇವುಗಳನ್ನೆಲ್ಲ ಪ್ರಾತಃಕಾಲದಲ್ಲೇ ಪೂರೈಸಬೇಕು.

## ಪರ್ವಕಾಲಗಳಲ್ಲಿನ ಮುಖ್ಯ ಕರ್ತವ್ಯ

77. ದೇವತಾನಭಿಗಚ್ಛೇತ್ತು ಧಾರ್ಮಿಕಾಂಶ್ಚ ದ್ವಿಜೋತ್ತಮಾನ್ ।
ಈಶ್ವರಂ ಚೈವ ರಕ್ಷಾರ್ಥಂ ಗುರೂನೇವ ಚ ಪರ್ವಸು ॥ -IV 153

ಪರ್ವಕಾಲಗಳಲ್ಲಿ ದೇವತೆಗಳನ್ನು, ಧಾರ್ಮಿಕರನ್ನು, ಶ್ರೇಷ್ಠ ಬ್ರಾಹ್ಮಣರನ್ನು, ರಾಜನನ್ನು ಮತ್ತು ಗುರುಗಳನ್ನು ಅವಶ್ಯವಾಗಿ ಸಂದರ್ಶಿಸಬೇಕು. ಹಾಗೆ ಮಾಡುವುದು ಒಳಿತಿಗೆ ಕಾರಣವಾಗುತ್ತದೆ.

## ಆಡುವ ಮಾತು ಹೀಗಿರಲಿ

78.[1]ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನ ಬ್ರೂಯಾತ್ಸತ್ಯಮಪ್ರಿಯಂ[2] ।
ಪ್ರಿಯಂ ಚ ನಾನೃತಂ ಬ್ರೂಯಾದೇಷ ಧರ್ಮಃ ಸನಾತನಃ ॥ -IV 138

ಸತ್ಯವನ್ನೇ ನುಡಿಯಬೇಕು, ಪ್ರಿಯವಾದುದುದನ್ನೇ ನುಡಿಯಬೇಕು ಅನಿವಾರ್ಯವಲ್ಲದ ಹೊರತು ಎಂದೂ ಸಹ ಪ್ರಿಯವಲ್ಲದ ಸತ್ಯವನ್ನೂ ಹೇಳಕೂಡದು, ಪ್ರಿಯವನ್ನುಂಟುಮಾಡಬೇಕೆಂಬ ಕಾರಣದಿಂದ ಎಂದೂ ಸಹ ಸುಳ್ಳನ್ನೂ ಹೇಳಕೂಡದು, ಇದೇ ಸನಾತನವಾದ ಧರ್ಮ

79. ಭದ್ರಂ ಭದ್ರಮಿತಿ ಬ್ರೂಯಾದ್ಭದ್ರಮಿತ್ಯೇವ ವಾ ವದೇತ್ ।
ಶುಷ್ಕವೈರಂ ವಿವಾದಂ ಚ ನ ಕುರ್ಯಾತ್ಕೇನಚಿತ್ಸಹ ॥ IV 139

'ಒಳ್ಳೆಯದು' 'ಒಳ್ಳೆಯದು' ಎಂದೇ ಯಾವಾಗಲೂ ಹೇಳಬೇಕು; 'ಒಳ್ಳೆಯದು' ಎಂದಿಷ್ಟಾದರೂ ಹೇಳಬೇಕು; ಯಾರೊಂದಿಗೂ ಒಣ ಜಗಳವನ್ನಾಗಲಿ, ವ್ಯರ್ಥ ದ್ವೇಷವನ್ನಾಗಲೀ ಕಟ್ಟಿಕೊಳ್ಳಕೂಡದು.

80 ನಾರುಂತದಃ ಸ್ಯಾದಾರ್ತೋಽಪಿ ನ ಪರದ್ರೋಹಕರ್ಮಧೀಃ ।
ಯಯಾಽಸ್ಯೋದ್ವಿಜತೇ ವಾಚಾ ನಾಲೋಕ್ಯಾಂ ತಾಮುದೀರಯೇತ್ ॥ II 161

ತನ್ನನ್ನು ನೋಯಿಸಿದವರಿಗೂ ಕೂಡ ಚುಚ್ಚು ಮಾತುಗಳನ್ನಾಡಕೂಡದು. ಪರರಿಗೆ ದ್ರೋಹ ಬಗೆಯುವ ಕೆಲಸಕ್ಕೆ ಎಂದೂ ಕೈ ಹಾಕಕೂಡದು. ಮತ್ತೊಬ್ಬರಿಗೆ ನೋವನ್ನುಂಟುಮಾಡುವ ಮಾತುಗಳನ್ನಾಗಲೀ ಸ್ವರ್ಗಾದಿ ಪುಣ್ಯಲೋಕಪ್ರಾಪಕವಲ್ಲದ ಮಾತುಗಳನ್ನಾಗಲೀ ಎಂದೂ ಆಡಕೂಡದು.

## ಇಂದ್ರಿಯನಿಗ್ರಹವು ಅತ್ಯವಶ್ಯ

81. ಇಂದ್ರಿಯಾಣಾಂ ವಿಚರತಾಂ ವಿಷಯೇಷ್ವಪಹಾರಿಷು ।
ಸಂಯಮೇ ಯತ್ನಮಾತಿಷ್ಠೇದ್ವಿದ್ವಾನ್ ಯಂತೇವ ವಾಜಿನಾಂ ॥ -II 88

---

[1] ಸತ್ಯಂ ವದ । (ತೈತ್ತಿರೀಯೋಪನಿಷತ್)

[2] ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ । - ಗೀತಾ (17/15)

ವಿಷಯಗಳಲ್ಲಿ ಸಂಚರಿಸುವುದು ಇಂದ್ರಿಗಳ ಸ್ವಭಾವ, ತಮ್ಮತ್ತ ಇಂದ್ರಿಯಗಳನ್ನು ಸೆಳೆದುಕೊಳ್ಳುವುದು ವಿಷಯಗಳ ಸ್ವಭಾವ; ವಿದ್ವಾಂಸನಾದವನು ಕುದುರೆಗಳನ್ನು ಸಾರಥಿಯು ಹೇಗೋ ಹಾಗೆ, ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿರಿಸಿಕೊಳ್ಳಲು ಸದಾ ಪ್ರಯತ್ನಿಸುತ್ತಿರಬೇಕು

82 ಇಂದ್ರಿಯಾಣಾಂ ಪ್ರಸಂಗೇನ ದೋಷಮೃಚ್ಛತ್ಯಸಂಶಯಮ್ ।
ಸಂನಿಯಮ್ಯ ತು ತಾನ್ಯೇವ ತತಃ ಸಿದ್ಧಿಂ ನಿಯಚ್ಛತಿ ॥ -II 93

ಇಂದ್ರಿಯಗಳಲ್ಲಿ ಬಹಳವಾಗಿ ಆಸಕ್ತನಾಗುವುದರಿಂದಾಗಿ ಮನುಷ್ಯನು ಹಾದಿ ತಪ್ಪುತ್ತಾನೆ, ಇಂದ್ರಿಯಗಳನ್ನು ನಿಗ್ರಹಿಸುವುದರ ಮೂಲಕ ಸಿದ್ಧಿಯನ್ನು ಸಂಪಾದಿಸುತ್ತಾನೆ.

## ಇಂದ್ರಿಯನಿಗ್ರಹಕ್ಕೆ ಉಪಾಯಗಳು

83 [1]ಅಲ್ಪಾನ್ನಾಭ್ಯವಹಾರೇಣ ರಹಃಸ್ಥಾನಾಸನೇನ ಚ ।
ಹ್ರಿಯಮಾಣಾನಿ ವಿಷಯೈರಿಂದ್ರಿಯಾಣಿ ನಿವರ್ತಯೇತ್ ॥ -IV 59

ಅಲ್ಪಾನ್ನಭೋಜನ ಮತ್ತು ಏಕಾಂತವಾಸ ಇವುಗಳ ಮೂಲಕ ವಿಷಯಗಳಿಂದ ಸೆಳೆಯಲ್ಪಡುವ ಇಂದ್ರಿಯಗಳನ್ನು ಹಿಂದಕ್ಕೆಳೆದುಕೊಳ್ಳಬೇಕು.

## ಪ್ರಾಣಾಯಾಮದಿಂದ ಇಂದ್ರಿಯನಿಗ್ರಹವು ಸಾಧ್ಯ

84 ದಹ್ಯಂತೇ ಧ್ಮಾಯಮಾನಾನಾಂ ಧಾತೂನಾಂ ಹಿ ಯಥಾ ಮಲಾಃ ।
ತಥೇಂದ್ರಿಯಾಣಾಂ ದಹ್ಯಂತೇ ದೋಷಾಃ ಪ್ರಾಣಸ್ಯ ನಿಗ್ರಹಾತ್ ॥ -VI 71

ಅಗ್ನಿಯಲ್ಲಿ ಸುಡಲ್ಪಟ್ಟಾಗ ಧಾತುಗಳ ದೋಷಗಳು ಹೇಗೆ ನಾಶವಾಗುವವೋ ಹಾಗೆಯೇ ಪ್ರಾಣಾಯಾಮದಿಂದ ಇಂದ್ರಿಯಗಳ ದೋಷಗಳೆಲ್ಲ ಭಸ್ಮವಾಗುತ್ತವೆ

## ಜ್ಞಾನವೇ ಇಂದ್ರಿಯನಿಗ್ರಹಕ್ಕೆ ಪ್ರಧಾನ ಸಾಧನ

85 ನ ತಥೈತಾನಿ ಶಕ್ಯಂತೇ ಸನ್ನಿಯಂತುಮಸೇವಯಾ ।
ವಿಷಯೇಷು ಪ್ರಜುಷ್ಟಾನಿ ಯಥಾ ಜ್ಞಾನೇನ ನಿತ್ಯಶಃ ॥ -II 96

---

1 ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ॥ - ಗೀತಾ (2/59)

ವಿಷಯಗಳಲ್ಲಿ ಪ್ರವರ್ತಿಸುವ ಇಂದ್ರಿಯಗಳನ್ನು ಕರ್ಮಾಕರಣದಿಂದ ನಿಗ್ರಹಿಸಲು ಸಾಧ್ಯವಾಗುವುದಿಲ್ಲ; ಅವುಗಳನ್ನು ಚೆನ್ನಾಗಿ ನಿಗ್ರಹಿಸಲು ಸಾಧ್ಯವಾಗುವುದು ಜ್ಞಾನದಿಂದ ಮಾತ್ರವೇ.

## ಮನಃಶುದ್ಧಿಯಿಲ್ಲದ ಎಲ್ಲ ಸತ್ಕಾರ್ಯಗಳೂ ನಿಷ್ಫಲ

86 ವೇದಾಸ್ತ್ಯಾಗಶ್ಚ ಯಜ್ಞಾಶ್ಚ ನಿಯಮಾಶ್ಚ ತಪಾಂಸಿ ಚ ।
ನ ವಿಪ್ರದುಷ್ಟಭಾವಸ್ಯ ಸಿದ್ಧಿಂ ಗಚ್ಛಂತಿ ಕರ್ಹಿಚಿತ್ ॥ -II 97

ಮನಃಶುದ್ಧಿಯಿಲ್ಲದ ಮನುಷ್ಯನು ಮಾಡುವ ವೇದಾಧ್ಯಯನ, ತ್ಯಾಗ, ಯಜ್ಞ, ವ್ರತ ಮತ್ತು ತಪಸ್ಸು ಮೊದಲಾದ ಎಲ್ಲವೂ ನಿಷ್ಫಲವೆನ್ನಿಸುತ್ತವೆ.

## ಜಿತೇಂದ್ರಿಯನ ಲಕ್ಷಣ

87 ಶ್ರುತ್ವಾದೃಷ್ಟ್ವಾ ಚ ಸ್ಪೃಷ್ಟ್ವಾ ಚ ಭುಕ್ತ್ವಾ ಘ್ರಾತ್ವಾ ಚ ಯೋ ನರಃ ।
ನ ಹೃಷ್ಯತಿ ಗ್ಲಾಯತಿ ವಾ ಸ ವಿಜ್ಞೇಯೋ ಜಿತೇಂದ್ರಿಯಃ ॥ II 98

ವಿಷಯಗಳ ಶ್ರವಣ, ದರ್ಶನ, ಸ್ಪರ್ಶನ, ಭೋಗಗಳಿಂದಾಗಿ ಯಾವನು ಹರ್ಷವನ್ನಾಗಲೀ ವಿಷಾದವನ್ನಾಗಲೀ ಹೊಂದುವುದಿಲ್ಲವೋ ಅವನೇ ಜಿತೇಂದ್ರಿಯ

## ಎಲ್ಲಾ ಇಂದ್ರಿಯಗಳನ್ನೂ ನಿಗ್ರಹಿಸಬೇಕು

88 ಇಂದ್ರಿಯಾಣಾಂ ತು ಸರ್ವೇಷಾಂ ಯದ್ಯೇಕಂ ಕ್ಷರತೀಂದ್ರಿಯಮ್ ।
ತೇನಾಸ್ಯ ಕ್ಷರತಿ ಪ್ರಜ್ಞಾ ದೃತೇಃ ಪಾದಾದಿವೋದಕಮ್ ॥ -II 99

ಚರ್ಮದ ಚೀಲದ ಬುಡದಲ್ಲಿ ಒಂದೇ ರಂಧ್ರವಿದ್ದರೂ ಅದರಲ್ಲಿಯ ನೀರೆಲ್ಲ ಸೋರಿ ಹೋಗುವಂತೆ, ಯಾವುದೇ ಒಂದು ಇಂದ್ರಿಯವು ಹಾದಿ ತಪ್ಪಿದರೂ, ಅದರಿಂದ ಆ ವ್ಯಕ್ತಿಯ ಜ್ಞಾನವೆಲ್ಲವೂ ನಷ್ಟವಾಗಿ ಹೋಗುತ್ತದೆ.

---

★ ಮನಃಶುದ್ಧಿವಿಹೀನತ್ವಾತ್ ಸರ್ವಂ ಕರ್ಮ ಸುನಿಷ್ಫಲಮ್ ॥

-ಪದ್ಮಪುರಾಣ

★ ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥ - ಗೀತಾ (2/64)

## ಇಂದ್ರಿಯನಿಗ್ರಹದ ಫಲ

89 ವಶೇ ಕೃತ್ವೇಂದ್ರಿಯಗ್ರಾಮಂ ಸಂಯಮ್ಯ ಚ ಮನಸ್ತಥಾ ।
ಸರ್ವಾನ್ ಸಂಸಾಧಯೇದರ್ಥಾನಕ್ಷಿಣ್ವನ್ ಯೋಗತಸ್ತನುಮ್ ॥ -II 100

ಇಂದ್ರಿಯಗಳ ಸಮೂಹವನ್ನು ವಶದಲ್ಲಿರಿಸಿಕೊಂಡು ಮನಸ್ಸನ್ನು ಸಹ ನಿಯಂತ್ರಿಸಿಕೊಂಡು, ದೇಹವನ್ನೂ ಪೀಡಿಸದಂತೆ ಉಪಾಯವಾಗಿ ಎಲ್ಲ ಪುರುಷಾರ್ಥಗಳನ್ನು ಸಾಧಿಸಿಕೊಳ್ಳಬೇಕು.

### ಸನ್ಮಾನಕ್ಕೆ ಆಶೆಪಡಕೂಡದು

90 ಸಮ್ಮಾನಾದ್ಬ್ರಾಹ್ಮಣೋ ನಿತ್ಯಮುದ್ವಿಜೇತ ವಿಷಾದಿವ ।
[1]ಅಮೃತಸ್ಯೇವ ಚಾಕಾಂಕ್ಷೇದವಮಾನಸ್ಯ ಸರ್ವದಾ ॥ -II 162

ಬ್ರಾಹ್ಮಣನಾದವನು ಎಂದೂ ಸನ್ಮಾನಕ್ಕೆ ಆಸೆಪಡಕೂಡದು ವಿಷದಿಂದ ಹೇಗೋ ಹಾಗೆ ಅದರಿಂದ ದೂರವಿರಬೇಕು ಅಮೃತವನ್ನು ಬಯಸುವಂತೆ ಅವಮಾನವನ್ನು ಸದಾ ಸ್ವಾಗತಿಸಬೇಕು.

91 ಸುಖಂ ಹ್ಯವಮತಃ ಶೇತೇ ಸುಖಂ ಚ ಪ್ರತಿಬುಧ್ಯತೇ ।
ಸುಖಂ ಚರತಿ ಲೋಕೇಽಸ್ಮಿನ್ ಹ್ಯವಮಂತಾ ವಿನಶ್ಯತಿ ॥ -II 163

ಅವಮಾನಿಸಲ್ಪಟ್ಟವನು ಈ ಲೋಕದಲ್ಲಿ ಸುಖವಾಗಿ ನಿದ್ರಿಸುತ್ತಾನೆ, ಎದ್ದೇಳುತ್ತಾನೆ, ಈ ಲೋಕದಲ್ಲಿ ಸುಖವಾಗಿಯೇ ಬದುಕುತ್ತಾನೆ, ಅವಮಾನಪಡಿಸಿದವನು ಮಾತ್ರ ಸಂಪೂರ್ಣವಾಗಿ ನಾಶವಾಗುತ್ತಾನೆ.

## ಜೀವನದಲ್ಲಿ ನಿರಾಶೆ ಬೇಡ

92 ನಾತ್ಮಾನಮವಮನ್ಯೇತ ಪೂರ್ವಾಭಿರಸಮೃದ್ಧಿಭಿಃ ।
ಆಮೃತ್ಯೋಃ ಶ್ರಿಯಮನ್ವಿಚ್ಛೇನ್ನೈನಾಂ ಮನ್ಯೇತ ದುರ್ಲಭಾಂ ॥ -IV 137

ಆ ಮೊದಲು ತನಗೆ ಸಂಪತ್ತು ಬರಲಿಲ್ಲವೆಂಬ ಕಾರಣದಿಂದ ಮನುಷ್ಯನು ತನ್ನನ್ನು ನಿಂದಿಸಿಕೊಳ್ಳಕೂಡದು; ಬದುಕಿರುವವರೆಗೂ ಉನ್ನತಿಗಾಗಿ ಶ್ರಮಿಸುತ್ತಲೇ ಇರಬೇಕು

---

1 ಅಪಮಾನವಾದರೆ ಒಳಿತು ಅಪರೂಪ ಹರಿನಾಮ ಜಪಿಸುವ ಮನುಜಗೆ ॥
-(ಪುರಂದರದಾಸರು)

ಅದು ತನ್ನ ಪಾಲಿಗೆ ದೊರೆಯದ ವಸ್ತುವೆಂದು ನಿರಾಸೆಯನ್ನು ಮಾತ್ರ ಸರ್ವಥಾ ಹೊಂದಕೂಡದು

## ಉನ್ನತಿಗಾಗಿ ಸತತ ಪ್ರಯತ್ನವು ಆವಶ್ಯಕ

93 ಆರಭೇತೈವ ಕರ್ಮಾಣಿ ಶ್ರಾಂತಃ ಶ್ರಾಂತಃ ಪುನಃ ಪುನಃ ।
ಕರ್ಮಾಣ್ಯಾರಭಮಾಣಂ ಹಿ ಪುರುಷಂ ಶ್ರೀರ್ನಿಷೇವತೇ ॥ -IX 300

ಎಷ್ಟೇ ಶ್ರಮವೆನ್ನಿಸಿದರೂ ತನ್ನ ಪಾಲಿನ ಕರ್ತವ್ಯವನ್ನು ಪೂರೈಸಲು ಮತ್ತೆ ಮತ್ತೆ ಯತ್ನಿಸುತ್ತಲೇ ಇರಬೇಕು, ಹಾಗೆ ಕರ್ತವ್ಯ ನಿರ್ವಹಣೆಗಾಗಿ ಶ್ರಮಿಸುವ ಮನುಷ್ಯನನ್ನು ಸಂಪತ್ತು ತಾನೇ ಹುಡುಕಿಕೊಂಡು ಬರುತ್ತದೆ

## ಸದಾಚಾರವನ್ನು ಉಳಿಸಿಕೊಳ್ಳಬೇಕು

94 ಶ್ರುತಿಸ್ಮೃತ್ಯುದಿತಂ ಸಮ್ಯಕ್ ನಿಬದ್ಧಂ ಸ್ವೇಷು ಕರ್ಮಸು ।
ಧರ್ಮಮೂಲಂ ನಿಷೇವೇತ ಸದಾಚಾರಮತಂದ್ರಿತಃ ॥ -IV 155

ತನ್ನ ವಿಹಿತ ಕರ್ಮಗಳಿಗೆ ಸಂಬಂಧಿಸಿದ ಶ್ರುತಿಸ್ಮೃತಿಗಳಲ್ಲಿ ಪ್ರತಿಪಾದಿತವಾದ ಧರ್ಮಮೂಲವಾದ ಸದಾಚಾರವನ್ನು ಆಲಸ್ಯವನ್ನು ಬಿಟ್ಟು ಸೇವಿಸಬೇಕು.

## ಆಚಾರದ ಮಹತ್ವ

95 ಆಚಾರಾಲ್ಲಭತೇ ಹ್ಯಾಯುರಾಚಾರಾದೀಪ್ಸಿತಾಃ ಪ್ರಜಾಃ ।
ಆಚಾರದ್ಧನಮಕ್ಷಯ್ಯಮಾಚಾರೋ ಹಂತ್ಯಲಕ್ಷಣಮ್ ॥ -IV 156

ಆಚಾರದಿಂದ ಆಯುಷ್ಯವು ಹೆಚ್ಚುತ್ತದೆ. ಸತ್ಸಂತಾನವು ಲಭಿಸುತ್ತದೆ. ಅಕ್ಷಯ ಐಶ್ವರ್ಯವು ದೊರೆಯುತ್ತದೆ. ಶರೀರದಲ್ಲಿನ ದುರ್ಲಕ್ಷಣಗಳು ಸಹ ನಾಶವಾಗುತ್ತವೆ

---

[1] ಪ್ರಯತ್ನಮೇಕಮಗ್ರತೋ ನಿಧಾಯ ಭೂತಿಮಾಪ್ನುಮಃ ॥
-ಮ. ಭಾ ಶಾ ನಿ (21/99)

ಪದಂ ಚತುರ್ಮುಖಸ್ಯ ವಾ ಸುಸಾಧ್ಯಮೇವ ಯತ್ನತಃ ।
-ಮ. ಭಾ ಶಾ ನಿ (21/97)

★ ಆಚಾರಪ್ರಭವೋ ಧರ್ಮಃ । (ಮಹಾಭಾರತ)

96 ಸರ್ವಲಕ್ಷಣಹೀನೋಽಪಿ ಯಃ ಸದಾಚಾರವಾನ್ ನರಃ ।
ಶ್ರದ್ಧಧಾನೋಽನಸೂಯಶ್ಚ ಶತಂ ವರ್ಷಾಣಿ ಜೀವತಿ ॥ -IV 158

ಎಲ್ಲ ಸಲ್ಲಕ್ಷಣಗಳೂ ಇಲ್ಲವಾಗಿದ್ದರೂ, ಸದಾಚಾರವನ್ನು ಅನುಸರಿಸುವ ಶ್ರದ್ಧಾಳುವೂ, ಮತ್ಸರರಹಿತನೂ ಆದ ಮನುಷ್ಯನು ನೂರು ವರ್ಷಗಳ ತುಂಬು ಬಾಳನ್ನು ಬಾಳುತ್ತಾನೆ.

## ದುರಾಚಾರದ ನಿಂದೆ

97 ದುರಾಚಾರೀ ಚ ಪುರುಷೋ ಲೋಕೇ ಭವತಿ ನಿಂದಿತಃ ।
ದುಃಖಭಾಗೀ ಚ ಸತತಂ ವ್ಯಾಧಿತೋಽಲ್ಪಾಯುರೇವ ಚ ॥ VI 157

ದುರಾಚಾರಿಯಾದ ಮನುಷ್ಯನು ಲೋಕದಲ್ಲಿ ನಿಂದಿಸಲ್ಪಡುತ್ತಾನೆ. ಸತತ ದುಃಖ ಹಾಗೂ ವಿವಿಧ ರೋಗಗಳು ಅವನಿಗೆ ತಪ್ಪಿದ್ದಲ್ಲ. ಅವನ ಆಯುಷ್ಯವು ಸಹ ಕ್ಷೀಣಿಸುತ್ತದೆ

## ಸ್ವಾವಲಂಬನೆಯಲ್ಲೀ ಸುಖವಿದೆ

98 ಯದ್ಯತ್ ಪರವಶಂ ಕರ್ಮ ತತ್ತದ್ಯತ್ನೇನ ವರ್ಜಯೇತ್ ।
ಯದ್ಯದಾತ್ಮವಶಂ ತು ಸ್ಯಾತ್ತತ್ತತ್ಸೇವೇತ ಯತ್ನತಃ ॥ -VI 159

ಮತ್ತೊಬ್ಬರಿಗೆ ಅಧೀನವಾದ ಎಲ್ಲ ಕಾರ್ಯಗಳನ್ನು ಪ್ರಯತ್ನಪೂರ್ವಕವಾಗಿ ಬಿಟ್ಟು ಬಿಡಬೇಕು; ಅಷ್ಟೇ ಪ್ರಯತ್ನದಿಂದ ತನ್ನ ವ್ಯಾಪ್ತಿಗೊಳಪಡುವ ಎಲ್ಲ ಕಾರ್ಯಗಳನ್ನೂ ಅನುಷ್ಠಾನಮಾಡಬೇಕು.

99 ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಮ್ ।
ಏತದ್ವಿದ್ಯಾತ್ಸಮಸ್ತೇನ ಲಕ್ಷಣಂ ಸುಖದುಃಖಯೋಃ ॥ -IV 160

ಮತ್ತೊಬ್ಬರಿಗೆ ಅಧೀನವಾದ ಎಲ್ಲ ಕಾರ್ಯಗಳೂ ದುಃಖಕರ, ತನಗೆ ಸೇರಿದ ಎಲ್ಲ ಕಾರ್ಯಗಳೂ ಅಷ್ಟೇ ಸುಖಕರ, ಒಟ್ಟಿನಲ್ಲಿ ಈ ಮಾತು ಎಲ್ಲ ಸುಖ ದುಃಖಗಳಿಗೂ ಅನ್ವಯಿಸುವ ಮುಖ್ಯ ಲಕ್ಷಣವಾಗಿದೆ.

## ಮಿಥ್ಯಾಚಾರವು ಹೇಯ

100. ನ ಧರ್ಮಸ್ಯಾಪದೇಶೇನ ಪಾಪಂ ಕೃತ್ವಾ ವ್ರತಂ ಚರೇತ್ ।
ವ್ರತೇನ ಪಾಪಂ ಪ್ರಚ್ಛಾದ್ಯ ಕುರ್ವನ್ ಸ್ತ್ರೀಶೂದ್ರದಂಭನಮ್ ॥ -IV 149

[1]ಧರ್ಮದ ಹೆಸರಿನಲ್ಲಿ ಅಧರ್ಮವನ್ನು ಆಚರಿಸಿ ಅದನ್ನು ಪರಿಹರಿಸಿಕೊಳ್ಳಲೆಂದು ವ್ರತಾಚರಣೆಯನ್ನು ಕೈಕೊಳ್ಳುವುದರಲ್ಲಿ ಯಾವ ಶ್ರೇಷ್ಠತೆಯೂ ಇಲ್ಲ; ಸ್ತ್ರೀಯರನ್ನು ಶೂದ್ರರನ್ನು ವಂಚಿಸುವ ಈ ರೀತಿಯ ನಡತೆಯನ್ನು ಶಾಸ್ತ್ರವು ಎಂದೂ ಒಪ್ಪುವುದಿಲ್ಲ

101 ಪ್ರೇತ್ಯೇಹ ಚೇದೃಶಾ ವಿಪ್ರಾ ಗರ್ಹ್ಯಂತೇ ಬ್ರಹ್ಮವಾದಿಭಿಃ ।
ಛದ್ಮನಾ ಚರಿತಂ ಯಚ್ಚ ವ್ರತಂ ರಕ್ಷಾಂಸಿ ಗಚ್ಛತಿ ॥ -IV 150

ಇಂತಹ ಬ್ರಾಹ್ಮಣರು ಮರಣಾನಂತರವೂ ಸಹ ಬ್ರಹ್ಮಜ್ಞಾನಿಗಳಿಂದ ನಿಂದಿಸಲ್ಪಡುತ್ತಾರೆ. ಕಪಟದ ಹಿನ್ನೆಲೆಯಲ್ಲಿ ಮಾಡಲ್ಪಡುವ ಇಂತಹ ಎಲ್ಲ ವ್ರತಗಳೂ ರಾಕ್ಷಸರ ಪಾಲಾಗುತ್ತವೆ

## ಮಿಥ್ಯಾವಾದವು ಆತ್ಮವಂಚನೆಯೇ ಸರಿ

102. ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಸತ್ಸು ಭಾಷತೇ ।
ಸ ಪಾಪಕೃತ್ತಮೋ ಲೋಕೇ ಸ್ತೇನೋ ಆತ್ಮಾಪಹಾರಕಃ[2] ॥ IV 151

ತನ್ನ ಬಗ್ಗೆ ಇಲ್ಲದ್ದನ್ನು ಹೇಳಿಕೊಳ್ಳುವ ಮನುಷ್ಯನು ಪಾಪಿಷ್ಠರಲ್ಲಿ ಅಗ್ರೇಸರನು; ತನ್ನನ್ನೇ ವಂಚಿಸಿಕೊಳ್ಳುವ ಅವನು ನಿಜಕ್ಕೂ ದೊಡ್ಡ ಕಳ್ಳನೇ ಸರಿ.

103 [3]ವಾಚ್ಯರ್ಥಾ ನಿಯತಾಃ ಸರ್ವೇ ವಾಙ್ಮೂಲಾ ವಾಂಙ್ವನಿಃಸೃತಾಃ ।
ತಾಂ ತು ಯಃ ಸ್ತೇನಯೇದ್ವಾಚಂ ನ ಸರ್ವಸ್ತೇಯಕೃನ್ನರಃ ॥ IV 152

ಎಲ್ಲಾ ಪುರುಷಾರ್ಥಗಳೂ ಮಾತಿನಲ್ಲೇ ನೆಲೆಸಿವೆ, ಮಾತಿನಿಂದಲೇ ಹುಟ್ಟುತ್ತವೆ,

[1] ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥
- ಗೀತಾ (3/6)

[2] ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪದ್ಯತೇ ।
ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥
- ಮಹಾಭಾರತ ( 1/74/27)

[3] ಲಕ್ಷ್ಮೀರ್ವಸತಿ ಜಿಹ್ವಾಗ್ರೇ ಜಿಹ್ವಾಗ್ರೇ ಮಿತ್ರಬಾಂಧವಾಃ ।
ಜಿಹ್ವಾಗ್ರೇ ಬಂಧನಂ ಪ್ರಾಪ್ತಂ ಜಿಹ್ವಾಗ್ರೇ ಮರಣಂ ಧ್ರುವಮ್ ॥ - ಸುಭಾಷಿತ

ಮಾತಿನಿಂದಲೇ ಹೊರಬರುತ್ತವೆ; ಅಂತಹ ಮಾತನ್ನೇ ಸುಳ್ಳಿನ ಮೂಲಕ ಕಲುಷಿತಗೊಳಿಸಿಕೊಳ್ಳುವ ಮನುಷ್ಯನು ಎಲ್ಲಾ ಬಗೆಯ ಕಳ್ಳತನಗಳನ್ನೂ ಮಾಡಿದಂತೆಯೇ ಸರಿ

## ಕೆಲವು ನಿಷಿದ್ಧ ಕಾರ್ಯಗಳು

104 ನೇಕ್ಷೇತೋದ್ಯಂತಮಾದಿತ್ಯಂ ನಾಸ್ತಂ ಯಂತಂ ಕದಾಚನ ।
ನೋಪಸೃಷ್ಟಂ ನ ವಾರಿಸ್ಥಂ ನ ಮಧ್ಯನಭಸೋ ಗತಮ್ ॥ -IV 37

ಉದಿಸುವಾಗಲೂ, ಅಸ್ತಮಿಸುವಾಗಲೂ, ಗ್ರಹಣ ಹಿಡಿದಾಗಲೂ, ಗಗನ ಮಧ್ಯದಲ್ಲಿರುವಾಗಲೂ ಸೂರ್ಯನನ್ನು ನೋಡಕೂಡದು, ನೀರಿನಲ್ಲಿ ಸೂರ್ಯನ ಪ್ರತಿಬಿಂಬವನ್ನು ನೋಡಕೂಡದು.

105 ನ ಲಂಘಯೇದ್ವತ್ಸತಂತ್ರೀಂ ನ ಪ್ರಧಾವೇಚ್ಚ ವರ್ಷತಿ ।
ನ ಚೋದಕೇ ನಿರೀಕ್ಷೇತ ಸ್ವಂ ರೂಪಮಿತಿ ಧಾರಣಾ ॥ IV 38

ಕರುವಿನ ಹಗ್ಗವನ್ನು ದಾಟಕೂಡದು; ಮಳೆ ಬರುತ್ತಿರುವಾಗ ಓಡಕೂಡದು; ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳಕೂಡದು

106 ರಜಸಾಽಭಿಪ್ಲುತಾಂ ನಾರೀಂ ನರಸ್ಯ ಹ್ಯುಪಗಚ್ಛತಃ ।
ಪ್ರಜ್ಞಾ ತೇಜೋ ಬಲಂ ಚಕ್ಷುರಾಯುಶ್ಚೈವ ಪ್ರಹೀಯತೇ ॥ IV 41

ರಜೋಯುಕ್ತಳಾದ ಸ್ತ್ರೀಯನ್ನು ಕೂಡುವವನ ಪ್ರಜ್ಞೆ, ತೇಜಸ್ಸು, ಬಲ, ಕಣ್ಣು ಮತ್ತು ಆಯುಷ್ಯಗಳು ನಾಶವಾಗುತ್ತವೆ.

107. ನಾಗ್ನಿಂ ಮುಖೇನೋಪಧಮೇನ್ನಗ್ನಾಂ ನೇಕ್ಷೇತ ಚ ಸ್ತ್ರಿಯಂ ।
ನಾಮೇಧ್ಯಂ ಪ್ರಕ್ಷಿಪೇದಗ್ನೌ ನ ಚ ಪಾದೌ ಪ್ರತಾಪಯೇತ್ ॥ -IV 53

ಬಾಯಿಯಿಂದ ಬೆಂಕಿಯನ್ನು ಊದಕೂಡದು; ನಗ್ನಸ್ತ್ರೀಯನ್ನು ನೋಡಕೂಡದು, ಕೊಳಚೆ ಪದಾರ್ಥಗಳನ್ನು ಬೆಂಕಿಯಲ್ಲಿ ಹಾಕಕೂಡದು; ಪಾದಗಳನ್ನು ಬೆಂಕಿಯಲ್ಲಿ ಕಾಯಿಸಿಕೊಳ್ಳಕೂಡದು.

108 ಅಧಸ್ತಾನ್ನೋಪದಧ್ಯಾಚ್ಚ ನ ಚೈನಮಭಿಲಂಘಯೇತ್ ।
ನ ಚೈನಂ ಪಾದತಃ ಕುರ್ಯಾನ್ನ ಚ ಪ್ರಾಣಾಬಾಧಮಾಚರೇತ್ ॥ IV 54

ಮಂಚ ಮೊದಲಾದವುಗಳ ಕೆಳಗೆ ಬೆಂಕಿಯನ್ನು ಇರಿಸಿಕೊಳ್ಳಕೂಡದು, ಬೆಂಕಿಯನ್ನು ದಾಟಕೂಡದು ಮತ್ತು ಕಾಲಿನಿಂದ ತುಳಿಯಕೂಡದು; ಪ್ರಾಣಾಪಾಯಕ್ಕೆ ಕಾರಣವಾಗುವ ಏನನ್ನೂ ಮಾಡಕೂಡದು.

109 ನಾಶ್ನೀಯಾತ್ ಸಂಧಿವೇಲಾಯಾಂ ನ ಗಚ್ಛೇನ್ನಾಪಿ ಸಂವಿಶೇತ್ ।
ನ ಚೈವ ಪ್ರಲೀಖೇದ್ಭೂಮಿಂ ನಾತ್ಮನೋಽಪಹರೇತ್ಸ್ರಜಂ ॥ -IV 56

ಸಂಧ್ಯಾಕಾಲಗಳಲ್ಲಿ ಉಣ್ಣಕೂಡದು, ಓಡಾಡಕೂಡದು, ನಿದ್ರಿಸಕೂಡದು, ಭೂಮಿಯ ಮೇಲೆ ಎಂದೂ ರೇಖೆಗಳನ್ನು ಬರೆಯಕೂಡದು; ತನ್ನ ಕೊರಳಲ್ಲಿ ಮಾಲೆಯನ್ನು ತಾನೇ ಹಾಕಿಕೊಳ್ಳಕೂಡದು.

110 ನಾಪ್ಸು ಮೂತ್ರಂ ಪುರೀಷಂ ವಾ ಷ್ಠೀವನಂ ವಾ ಸಮುತ್ಸೃಜೇತ್ ।
ಅಮೇಧ್ಯಲಿಪ್ತಮನ್ಯದ್ವಾ ಲೋಹಿತಂ ವಾ ವಿಷಾಣಿ ವಾ ॥ -IV 56

ಮೂತ್ರ, ಮಲ, ಕಫ ಮೊದಲಾದವುಗಳನ್ನು ನೀರಿನಲ್ಲಿ ವಿಸರ್ಜಿಸಕೂಡದು, ಕೊಳಕು ಮೆತ್ತಿದ ಏನನ್ನೂ ನೀರಿನಲ್ಲಿ ಹಾಕಕೂಡದು. ರಕ್ತವನ್ನು, ವಿಷವದಾರ್ಥಗಳನ್ನು ಕೂಡ ನೀರಿಗೆ ಹಾಕಕೂಡದು.

111. ನಾಧಾರ್ಮಿಕೇ ವಸೇದ್ಗ್ರಾಮೇ ನ ವ್ಯಾಧಿಬಹುಲೇ ಭೃಶಮ್ ।
ನೈಕಃ ಪ್ರಪದ್ಯೇತಾಧ್ವಾನಂ ನ ಚಿರಂ ಪರ್ವತೇ ವಸೇತ್ ॥ -IV 60

ಧಾರ್ಮಿಕರಿಲ್ಲದ ಊರಿನಲ್ಲೂ, ಅನೇಕ ವ್ಯಾಧಿಗಳಿಂದ ತುಂಬಿದ ಗ್ರಾಮದಲ್ಲೂ ನೆಲೆಸಕೂಡದು. ಒಂಟಿಯಾಗಿ ಪ್ರಯಾಣ ಕೈಕೊಳ್ಳಬಾರದು ಪರ್ವತದ ಮೇಲೆ ಹೆಚ್ಚು ಸಮಯ ವಾಸಿಸಕೂಡದು.

112. ನ ಭುಂಜೀತೋದ್ಧೃತಸ್ನೇಹಂ ನಾತಿಸೌಹಿತ್ಯಮಾಚರೇತ್ ।
ನಾತಿಪ್ರಗೇ ನಾತಿಸಾಯಂ ನ ಸಾಯಂ ಪ್ರಾತರಾಶಿತಃ ॥ IV 62

ಎಣ್ಣೆ ತೆಗೆದ ಹಿಂಡಿ ಮೊದಲಾದ ಪದಾರ್ಥಗಳನ್ನು ತಿನ್ನಕೂಡದು; ಹೊಟ್ಟೆ ತುಂಬಿದ ಮೇಲೆ ಮತ್ತೆ ತಿನ್ನಕೂಡದು; ಬೆಳಿಗ್ಗೆ ಅತಿ ಬೇಗನೇ ಮತ್ತು ಸಾಯಂಕಾಲ ತುಂಬಾ ತಡವಾಗಿ ಭೋಜನ ಮಾಡಬಾರದು; ಬೆಳಿಗ್ಗೆ ಹೆಚ್ಚು ತಿಂದಿದ್ದಲ್ಲಿ ರಾತ್ರಿ ಉಣ್ಣಕೂಡದು

113 ನ ಕುರ್ವೀತ ವೃಥಾ ಚೇಷ್ಟಾಂ ನ ವಾಯುಂಜಲಿನಾ ಪಿಬೇತ್ ।
ನೋತ್ಸಂಗೇ ಭಕ್ಷಯೇದ್ಭಕ್ಷ್ಯಾನ್ನ ಜಾತು ಸ್ಯಾತ್ ಕುತೂಹಲೀ ॥ IV 63

ವ್ಯರ್ಥವಾದ ಕಾರ್ಯಗಳನ್ನು ಮಾಡಬಾರದು, ಬೊಗಸೆಯಿಂದ ನೀರನ್ನು ಕುಡಿಯಕೂಡದು; ಭಕ್ಷ್ಯಗಳನ್ನು ತೊಡೆಯಮೇಲಿರಿಸಿಕೊಂಡು ತಿನ್ನಬಾರದು ಪ್ರಯೋಜನವಿಲ್ಲದ ಕುತೂಹಲವನ್ನೂ ಹೊಂದಕೂಡದು.

114 ನ ನೃತ್ಯೇದಥವಾ ಗಾಯೇನ್ನ ವಾದಿತ್ರಾಣಿ ವಾದಯೇತ್ ।
ನಾಸ್ಫೋಟಯೇನ್ನ ಚ ಕ್ಷ್ವೇಡೇನ್ನ ಚ ರಕ್ತೋ ವಿರಾವಯೇತ್ ॥ -IV 64

ಶಾಸ್ತ್ರಕ್ಕೆ ವಿರುದ್ಧವಾಗಿ ಕುಣಿಯಬಾರದು, ಹಾಡಬಾರದು, ವಾದ್ಯಗಳನ್ನು ನುಡಿಸಬಾರದು, ತೋಳುಗಳನ್ನು ತಟ್ಟಿಕೊಳ್ಳಕೂಡದು, ಹಲ್ಲುಗಳನ್ನು ಕಡಿಯಕೂಡದು; ವಿನೋದಕ್ಕಾಗಿ ಕೂಗಿಕೊಳ್ಳಬಾರದು.

115 ಉಪಾನಹೌ ಚ ವಾಸಶ್ಚ ಧೃತಮನ್ಯೈರ್ನ ಧಾರಯೇತ್ ।
ಉಪವೀತಮಲಂಕಾರಂ ಸ್ರಜಂ ಕರಕಮೇವಚ ॥ -IV 66

ಮತ್ತೊಬ್ಬರಿಂದ ಧರಿಸಲ್ಪಟ್ಟ ಪಾದರಕ್ಷೆ, ವಸ್ತ್ರ, ಉಪವೀತ, ಅಲಂಕಾರ ಸಾಮಾಗ್ರಿಗಳು, ಪುಷ್ಪಮಾಲೆ, ಕಮಂಡಲು ಮೊದಲಾದವುಗಳನ್ನು ಉಪಯೋಗಿಸಕೂಡದು.

116 ಬಾಲಾತಪಃ ಪ್ರೇತಧೂಮೋ ವರ್ಜ್ಯಂ ಭಿನ್ನಂ ತಥಾಽಽಸನಂ ।
ನ ಛಿಂದ್ಯಾನ್ನಖಲೋಮಾನಿ ದಂತೈರ್ನೋತ್ಪಾಟಯೇನ್ನಖಾನ್ ॥ -IV 69

ಬೆಳಗಿನ ಬಿಸಿಲು, ಸ್ಮಶಾನದ ಧೂಮ, ಒಡಕು ಪೀಠೋಪಕರಣಗಳು, ಇವುಗಳನ್ನು ತ್ಯಜಿಸಬೇಕು. ತನ್ನ ಉಗುರು ಹಾಗೂ ಕೂದಲುಗಳನ್ನು ತಾನೇ ಕತ್ತರಿಸಿಕೊಳ್ಳಕೂಡದು; ಹಲ್ಲುಗಳಿಂದ ಉಗುರುಗಳನ್ನು ಕತ್ತರಿಸಕೂಡದು

117 ನ ಮೃಲ್ಲೋಷ್ಟಂ ಚ ಮೃದ್ನೀಯಾನ್ನ ಛಿಂದ್ಯಾತ್ಕರಜೈಸ್ತೃಣಂ ।
ನ ಕರ್ಮ ನಿಷ್ಫಲಂ ಕುರ್ಯಾನ್ನಾಯತ್ಯಾಮಸುಖೋದಯಂ ॥ -IV 70

ಮಣ್ಣು ಹೆಂಟೆಗಳನ್ನು ಒಡೆಯಬಾರದು; ಉಗುರುಗಳಿಂದ ಹುಲ್ಲನ್ನು ಕತ್ತರಿಸಕೂಡದು; ನಿಷ್ಫಲವೂ, ಮುಂದೆ ದುಃಖವನ್ನುಂಟುಮಾಡುವಂತಹದೂ ಆದ ಕಾರ್ಯಕ್ಕೆ ಎಂದೂ ಕೈ ಹಾಕಬಾರದು.

118 ಲೋಷ್ಟಮರ್ದೀ ತೃಣಚ್ಛೇದೀ ನಖಖಾದೀ ಚ ಯೋ ನರಃ ।
ಸ ವಿನಾಶಂ ವ್ರಜತ್ಯಾಶು ಸೂಚಕೋಽಶುಚಿರೇವ ಚ ॥ -IV 71

ಮಣ್ಣು ಹೆಂಟೆಗಳನ್ನು ಒಡೆಯುವ, ಉಗುರುಗಳಿಂದ ಹುಲ್ಲನ್ನು ಕತ್ತರಿಸುವ, ಉಗುರುಗಳನ್ನು ತಿನ್ನುವ ಮನುಷ್ಯನು ಬೇಗನೇ ನಾಶವನ್ನು ಹೊಂದುತ್ತಾನೆ. ಅದೇ ರೀತಿ ಚಾಡಿಕೋರನೂ, ಅಶುಚಿಯೂ ಆದ ಮನುಷ್ಯನೂ ಹಾಳಾಗುತ್ತಾನೆ.

119. ನ ವಿಗರ್ಹ್ಯ ಕಥಾಂ ಕುರ್ಯಾದ್ಬಹಿರ್ಮಾಲ್ಯಂ ನ ಧಾರಯೇತ್ ।
ಗವಾಂ ಚ ಯಾನಂ ಪೃಷ್ಠೇನ ಸರ್ವಥೈವ ವಿಗರ್ಹಿತಂ ॥ -VI 72

ಧರ್ಮವಿರುದ್ಧವಾದ ಗೋಷ್ಠಿಗಳಲ್ಲಿ ಭಾಗವಹಿಸಬಾರದು; ತುಂಬಾ ಉದ್ದವಾದ ಮಾಲೆಯನ್ನು ಹಾಕಿಕೊಳ್ಳಕೂಡದು; ಗೋವುಗಳ ಬೆನ್ನಮೇಲೆ ಕುಳಿತು ಸವಾರಿಮಾಡುವುದು ಸರ್ವಥಾ ನಿಂದನೀಯ.

120. ಅದ್ವಾರೇಣ ಚ ನಾತೀಯಾದ್ಗ್ರಾಮಂ ವಾ ವೇಶ್ಮ ವಾ ವೃತಂ ।
ರಾತ್ರೌ ಚ ವೃಕ್ಷಮೂಲಾನಿ ದೂರತಃ ಪರಿವರ್ಜಯೇತ್ ॥ -IV 73

ಊರನ್ನೇ ಆಗಲಿ ಮನೆಯನ್ನೇ ಆಗಲಿ ಕಳ್ಳದಾರಿಯಲ್ಲಿ ಪ್ರವೇಶಿಸಕೂಡದು, ರಾತ್ರಿಕಾಲದಲ್ಲಿ ಮರಗಳ ಬುಡಗಳನ್ನು ಸರ್ವಥಾ ಆಶ್ರಯಿಸಬಾರದು.

121. ಅಚಕ್ಷುರ್ವಿಷಯಂ ದುರ್ಗಂ ನ ಪ್ರಪದ್ಯೇತ ಕರ್ಹಿಚಿತ್ ।
ನ ವಿಣ್ಮೂತ್ರಮುದೀಕ್ಷೇತ ನ ಬಾಹುಭ್ಯಾಂ ನದೀಂ ತರೇತ್ ॥ -IV 77

ಆ ಮೊದಲು ನೋಡದ ಕೋಟೆಯನ್ನು ಒಬ್ಬಂಟಿಗನಾಗಿ ಎಂದೂ ಪ್ರವೇಶಿಸಕೂಡದು; ಮಲಮೂತ್ರಗಳನ್ನು ನೋಡಕೂಡದು; ಈಜುತ್ತಾ ನದಿಯನ್ನು ದಾಟಕೂಡದು.

122. ಅಧಿತಿಷ್ಠೇನ್ನ ಕೇಶಾಂಸ್ತು ನ ಭಸ್ಮಾಸ್ಥಿಕಪಾಲಿಕಾಃ ।
ನ ಕಾರ್ಪಾಸಾಸ್ಥಿ ನ ತುಷಾನ್ ದೀರ್ಘಮಾಯುರ್ಜಿಜೀವಿಷುಃ ॥ -IV 78

ಬಹುಕಾಲ ಬದುಕಬಯಸುವವನು ಕೂದಲುಗಳು, ಬೂದಿ, ಮೂಳೆ, ಕಪಾಲ, ಒಡೆದ ಮಡಿಕೆಯ ಚೂರುಗಳು, ಧಾನ್ಯದ ಹೊಟ್ಟು ಇವುಗಳ ಮೇಲೆ ನಿಲ್ಲಕೂಡದು

123 ನ ಸಂಹತಾಭ್ಯಾಂ ಪಾಣಿಭ್ಯಾಂ ಕಂಡೂಯೇದಾತ್ಮನಃ ಶಿರಃ ।
ನ ಸ್ಪೃಶೇದೇತದುಚ್ಛಿಷ್ಟೋ ನ ಚ ಸ್ನಾಯಾದ್ವಿನಾ ತತಃ ॥ IV 82

ಎರಡೂ ಕೈಗಳನ್ನು ಒಟ್ಟು ಮಾಡಿಕೊಂಡು ತನ್ನ ತಲೆಯನ್ನು ತುರಿಸಿಕೊಳ್ಳಬಾರದು. ಎಂಜಲು ಕೈಯಿಂದ ತಲೆಯನ್ನು ಮುಟ್ಟಿಕೊಳ್ಳಕೂಡದು; ತಲೆ ನೆನೆಸಿಕೊಳ್ಳದೆ ಸ್ನಾನ ಮಾಡಕೂಡದು.

124 ನೋಚ್ಛಿಷ್ಟಂ ಕಸ್ಯಚಿದ್ದದ್ಯಾನ್ನಾದ್ಯಾಚ್ಚೈವ ತಥಾಽಂತರಾ ।
ನ ಚೈವಾಧ್ಯಶನಂ ಕುರ್ಯಾನ್ನ ಚೋಚ್ಛಿಷ್ಟಃ ಕ್ವಚಿದ್ವ್ರಜೇತ್ ॥ -II 56

ತನ್ನ ಎಂಜಲನ್ನು ಮತ್ತೊಬ್ಬರಿಗೆ ಕೊಡಕೂಡದು; ಎರಡು ಊಟಗಳ ಮಧ್ಯೆ ಮತ್ತೊಮ್ಮೆ ಉಣ್ಣಬಾರದು; ಮಿತಿ ಮೀರಿ ತಿನ್ನಬಾರದು. ಕೈ ತೊಳೆಯದೆ ಓಡಾಡಕೂಡದು.

## ಇವರನ್ನು ಅಪಹಾಸ್ಯಮಾಡಕೂಡದು

125. ಹೀನಾಂಗಾನತಿರಿಕ್ತಾಂಗಾನ್ ವಿದ್ಯಾಹೀನಾನ್ ವಯೋऽಧಿಕಾನ್ ।
ರೂಪದ್ರವ್ಯವಿಹೀನಾಂಶ್ಚ ಜಾತಿಹೀನಾಂಶ್ಚ ನಾಕ್ಷಿಪೇತ್ ॥ -IV 141

ಅಂಗವಿಕಲರು, ಆರು ಬೆರಳು ಮೊದಲಾಗಿ ಹೆಚ್ಚು ಅಂಗಗಳನ್ನು ಹೊಂದಿರುವವರು, ವಿದ್ಯೆಯಿಲ್ಲದವರು, ಮುದುಕರು, ರೂಪವಿಲ್ಲದವರು, ದರಿದ್ರರು, ಕೀಳುಜಾತಿಯವರು ಮೊದಲಾದವರನ್ನು ಅಪಹಾಸ್ಯಮಾಡಕೂಡದು.

## ಇವರನ್ನು ನೋಯಿಸಕೂಡದು

126. ಆಚಾರ್ಯಂ ಚ ಪ್ರವಕ್ತಾರಂ ಪಿತರಂ ಮಾತರಂ ಗುರುಮ್ ।
ನ ಹಿಂಸ್ಯಾದ್ಬ್ರಾಹ್ಮಣಾನ್ ಗಾಶ್ಚ ಸರ್ವಾಂಶ್ಚೈವ ತಪಸ್ವಿನಃ ॥ -IV 162

ವಿದ್ಯೋಪದೇಶಕರಾದ ಆಚಾರ್ಯರನ್ನು, ಗುರುಗಳನ್ನು, ತಂದೆತಾಯಿಗಳನ್ನು, ಬ್ರಾಹ್ಮಣರನ್ನು, ಗೋವುಗಳನ್ನು ಮತ್ತು ತಪಸ್ವಿಗಳನ್ನು ಎಂದೂ ನೋಯಿಸಕೂಡದು

## ಇವುಗಳನ್ನು ತ್ಯಜಿಸಬೇಕು

127. ನಾಸ್ತಿಕ್ಯಂ ವೇದನಿಂದಾಂ ಚ ದೇವತಾನಾಂ ಚ ಕುತ್ಸನಮ್ ।
ದ್ವೇಷಂ ದಂಭಂ ಚ ಮಾನಂ ಚ ಕ್ರೋಧಂ ತೈಕ್ಷ್ಣ್ಯಂ ಚ ವರ್ಜಯೇತ್ ॥ -IV 163

ನಾಸ್ತಿಕ ಮನೋಭಾವ, ವೇದಗಳ ನಿಂದೆ, ದೇವತೆಗಳನ್ನು ಜರೆಯುವುದು, ದ್ವೇಷ, ಅಹಂಕಾರ, ದುರಭಿಮಾನ, ಕ್ರೋಧ ಮತ್ತು ಕ್ರೌರ್ಯ, ಇವುಗಳನ್ನೆಲ್ಲ ತ್ಯಜಿಸಬೇಕು

## ಚಾಪಲ್ಯ ಕೂಡದು

128 ನ ಪಾಣಿಪಾದಚಪಲೋ ನ ನೇತ್ರಚಪಲೋऽನೃಜುಃ ।
ನ ಸ್ಯಾದ್ವಾಕ್ಚಪಲಶ್ಚೈವ ನ ಪರದ್ರೋಹಕರ್ಮಧೀಃ ॥ -IV 177

ಕೈಕಾಲುಗಳ ಚಾಪಲ್ಯ, ವಾಕ್ಚಾಪಲ್ಯ, ನೇತ್ರಚಾಪಲ್ಯ ಮೊದಲಾದವುಗಳನ್ನು ಬಿಟ್ಟು, ಋಜು ನಡತೆಯನ್ನು ಹೊಂದಬೇಕು ಪರದ್ರೋಹಕ್ಕೆ ಕಾರಣವಾಗುವ ಕೆಲಸಗಳಿಗೆ ಎಂದೂ ಕೈ ಹಾಕಕೂಡದು

## ಇವರನ್ನು ಅವಮಾನಿಸಕೂಡದು

129 ಕ್ಷತ್ರಿಯಂ ಚೈವ ಸರ್ಪಂ ಚ ಬ್ರಾಹ್ಮಣಂ ಚ ಬಹುಶ್ರುತಮ್ ।
ನಾವಮನ್ಯೇತ ವೈ ಭೂಷ್ಣುಃ ಕೃಶಾನಪಿ ಕದಾಚನ ॥ -IV 135

ಅಭ್ಯುದಯವನ್ನು ಬಯಸುವವನು ಕ್ಷತ್ರಿಯ, ಸರ್ಪ ಮತ್ತು ಬಹುಶ್ರುತನಾದ ಬ್ರಾಹ್ಮಣ ಈ ಮೂವರನ್ನು ಅವರು ಎಷ್ಟೇ ಕೃಶರಾಗಿದ್ದರೂ ನಹ ಅವಮಾನಿಸಬಾರದು

130 ಏತತ್ತ್ರಯಂ ಹಿ ಪುರುಷಂ ನಿರ್ದಹೇದವಮಾನಿತಮ್ ।
ತಸ್ಮಾದೇತತ್ತ್ರಯಂ ನಿತ್ಯಂ ನಾವಮನ್ಯೇತ ಬುದ್ಧಿಮಾನ್ ॥ -IV 136

ಈ ಮೂವರು ತಮ್ಮನ್ನು ಕೆಣಕಿದವರನ್ನು ಭಸ್ಮಮಾಡುತ್ತಾರೆ. ಆದ್ದರಿಂದ ಈ ಮೂವರನ್ನು ಬುದ್ಧಿವಂತನಾದವನು ಎಂದೂ ಅವಮಾನಿಸಕೂಡದು.

## ದಾನದ ಹಿರಿಮೆ

131 ತಪಃ ಪರಂ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೇ ।
ದ್ವಾಪರೇ ಯಜ್ಞಮೇವಾಹುರ್ದಾನಮೇಕಂ ಕಲೌ ಯುಗೇ ॥ -I 86

ಕೃತಯುಗದಲ್ಲಿ ತಪಸ್ಸು ಶ್ರೇಷ್ಠ; ತ್ರೇತಾಯುಗದಲ್ಲಿ ಜ್ಞಾನಕ್ಕೆ ಪ್ರಾಧಾನ್ಯ, ಯಜ್ಞವೇ ದ್ವಾಪರಯುಗದ ಶ್ರೇಷ್ಠಕಾರ್ಯ; ಆದರೆ ಕಲಿಯುಗದಲ್ಲಿ ಶ್ರೇಷ್ಠ ಧರ್ಮವೆಂದರೆ ದಾನವೇ.

## ಜ್ಞಾನವಿಲ್ಲದ ದಾನ ಹಾನಿಕರ

132. ಯಥಾ ಪ್ಲವೇನೌಪಲೇನ ನಿಮಜ್ಜತ್ಯುದಕೇ ತ್ವರನ್ ।
ತಥಾ ನಿಮಜ್ಜತೋಽಧಸ್ತಾದಜ್ಞೌ ದಾತೃಪ್ರತೀಚ್ಛಕೌ ॥ -IV 194

ಕಲ್ಲಿನ ದೋಣಿಯಲ್ಲಿಕುಳಿತವನು ತೀವ್ರಗತಿಯಲ್ಲಿ ಮುಳುಗಿ ಹೋಗುವಂತೆ, ದಾನದ ವಿಧಿವಿಧಾನಗಳನ್ನು ತಿಳಿಯದೇ ದಾನ ಕೊಡುವ ಹಾಗೂ ದಾನ ತೆಗೆದುಕೊಳ್ಳುವ ಇಬ್ಬರೂ ಅಧೋಗತಿಯನ್ನು ಹೊಂದುತ್ತಾರೆ

## ಶ್ರದ್ಧೆಯಿಂದ ದಾನಕೊಡಬೇಕು

133. ಶ್ರದ್ಧಯೇಷ್ಟಂ ಚ ಪೂರ್ತಂ ಚ ನಿತ್ಯಂ ಕುರ್ಯಾದತಂದ್ರಿತಃ ।
ಶ್ರದ್ಧಾಕೃತೇ ಹ್ಯಕ್ಷಯೇ ತೇ ಭವತಃ ಸ್ವಾಗತೈರ್ಧನೈಃ ॥ -IV 226

ಯಾಗ, ಕೆರೆಬಾವಿಗಳ ನಿರ್ಮಾಣ ಮೊದಲಾದ ಸತ್ಕಾರ್ಯಗಳನ್ನು ನಿತ್ಯದಲ್ಲೂ ಶ್ರದ್ಧೆಯಿಂದ, ಆಲಸ್ಯವಿಲ್ಲದೆ ಮಾಡಬೇಕು ಸರಿಯಾದ ರೀತಿಯಲ್ಲಿ ಸಂಪಾದಿಸಿದ ಹಣವನ್ನು ವಿನಿಯೋಗಿಸಿ ಶ್ರದ್ಧೆಯಿಂದ ನಡೆಸಲ್ಪಟ್ಟ ಅಂತಹ ಕಾರ್ಯಗಳು 'ಅಕ್ಷಯ'ವೆನ್ನಿಸುತ್ತವೆ.

## ಶ್ರೇಷ್ಠವಾದ ದಾನ

134. ಸರ್ವೇಷಾಮೇವ ದಾನಾನಾಂ ಬ್ರಹ್ಮದಾನಂ ವಿಶಿಷ್ಯತೇ ।
ವಾರ್ಯನ್ನಗೋಮಹೀವಾಸಸ್ತಿಲಕಾಂಚನಸರ್ಪಿಷಾಂ ॥ -IV 233

ನೀರು, ಅನ್ನ, ಗೋ, ಭೂಮಿ, ವಸ್ತ್ರ, ಕನ್ಯಾ, ಚಿನ್ನ, ತುಪ್ಪ ಮೊದಲಾದ ಎಲ್ಲಾ ದಾನಗಳಿಗಿಂತಲೂ ಬ್ರಹ್ಮ ವಿದ್ಯಾ ದಾನವೇ ಹೆಚ್ಚು ಶ್ರೇಷ್ಠವೆನ್ನಿಸುತ್ತದೆ.

---

1 ಶ್ರದ್ಧಯಾ ದೇಯಂ । ಅಶ್ರದ್ಧಯಾಽದೇಯಂ ।
-ತೈತ್ತಿರೀಯೋಪನಿಷತ್

ಶ್ರದ್ಧಾ ಹಿ ಪರಮಾ ಗತಿಃ । - ಗೀತಾ
ಅಶ್ರದ್ಧಯಾ ಹುತಂ ಜಪ್ತಂ ತಪಸ್ತಪ್ತಂ ಕೃತಂ ಚ ಯತ್ ।
ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥
- ಗೀತಾ (17/28)

ಧರ್ಮೇಣೇಜ್ಯಾಸಾಧನಾನಿ ಸಾಧಯಿತ್ವಾ ವಿಧಾನತಃ ।
ಸ್ನಾತ್ವಾ ಸಂಪೂಜಯೇದ್ವಿಷ್ಣುಂ ವೇದತಂತ್ರೋಕ್ತಮಾರ್ಗತಃ ॥
- ಸದಾಚಾರಸ್ಮೃತಿ

## ದಾನದ ಫಲ

135 ಯೇನ ಯೇನ ತು ಬಾವೇನ ಯದ್ಯದ್ದಾನಂ ಪ್ರಯಚ್ಛತಿ ।
ತತ್ತತ್ತೇನೈವ ಭಾವೇನ ಪ್ರಾಪ್ನೋತಿ ಪ್ರತಿಪೂಜಿತಃ ॥ -IV 234

ಯಾವ ಯಾವ ಮನೋಭಾವದಿಂದ ಯಾವ ಯಾವ ದಾನಗಳನ್ನು ಮನುಷ್ಯನು ಮಾಡುತ್ತಾನೋ, ಅಂತಹುದೇ ಫಲಗಳು ಅವನಿಗೆ ಲಭಿಸುತ್ತವೆ.

136. ಪಾತ್ರಸ್ಯ ಹಿ ವಿಶೇಷೇಣ ಶ್ರದ್ಧದಾನತಯೈವ ಚ ।
ಅಲ್ಪಂ ವಾ ಬಹು ವಾ ಪ್ರೇತ್ಯ ದಾನಸ್ಯಾವಾಪ್ಯತೇ ಫಲಮ್ ॥ -VII 86

ದಾನ ತೆಗೆದುಕೊಳ್ಳುವವನ ಯೋಗ್ಯತೆ ಮತ್ತು ದಾನಕೊಡುವವನಲ್ಲಿಯ ಶ್ರದ್ಧೆ ಈ ಎರಡೂ ಒಂದು ದಾನಕ್ಕೆ ದೊರೆಯುವ ಫಲವನ್ನು ನಿರ್ಧರಿಸುತ್ತವೆ. ನರಿಯಾದ ರೀತಿಯಲ್ಲಿ ಕೊಡಲ್ಪಟ್ಟ ದಾನವು ಸ್ವಲ್ಪವೇ ಇರಲಿ, ಬಹಳವೇ ಇರಲಿ, ಫಲಕೊಡುವುದಂತೂ ನಿಶ್ಚಿತ.

137 ಸಮಮಬ್ರಾಹ್ಮಣೇ ದಾನಂ ದ್ವಿಗುಣಂ ಬ್ರಾಹ್ಮಣಬ್ರುವೇ ।
ಪ್ರಾಧೀತೇ ಶತಸಾಹಸ್ರಮನಂತಂ ವೇದಪಾರಗೇ ॥ -VII 85

ಬ್ರಾಹ್ಮಣನಲ್ಲದವನಿಗೆ ಕೊಡಲ್ಪಡುವ ದಾನವು ಸಮಫಲವನ್ನು ಕೊಡುತ್ತದೆ. ಬ್ರಾಹ್ಮಣ ಎಂದು ಹೇಳಿಕೊಳ್ಳುವವನಿಗೆ ಕೊಡುವ ದಾನವು ಇಮ್ಮಡಿ ಫಲ ಕೊಡುತ್ತದೆ.

---

1 ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।
ದೇಶೇ ಕಾಲೇ ತಥಾ ಪಾತ್ರೇ ತದ್ದಾನಂ ಸಾತ್ವಿಕಂ ಸ್ಮೃತಂ ॥
- ಭಗವದ್ಗೀತಾ (17/20)

2 ಗರ್ಭಾದಾನಾದಿಸಂಸ್ಕಾರವೇದೋಪನಯನೈರ್ಯುತಃ ।
ನಾಧ್ಯಾಪಯತಿ ನಾಧೀತೇ ಸ ಭವೇದ್ಬ್ರಾಹ್ಮಣಬ್ರುವಃ ॥
- ಬೋಧಾಯನಃ

ಗರ್ಭಾಧಾನಾದಿ ಇತರ ಸಂಸ್ಕಾರಗಳನ್ನು ಹೊಂದಿದ್ದರೂ, ಬ್ರಾಹ್ಮಣನ ಮುಖ್ಯ ಕರ್ತವ್ಯವಾದ ಅಧ್ಯಯನ ಮತ್ತು ಅಧ್ಯಾಪನಗಳನ್ನು ಮಾಡದವನು 'ಬ್ರಾಹ್ಮಣ ಬ್ರುವ' ಎನಿಸುವನು.

ಅಧ್ಯಯನಶೀಲನಿಗೆ ಕೊಡುವ ದಾನವು ನೂರರಷ್ಟು, ಸಾವಿರದಷ್ಟು ವರ್ಧಿಸುತ್ತದೆ. ವೇದಾರ್ಥವನ್ನು ಅರಿತವನಿಗೆ ಮಾಡುವ ದಾನದ ಫಲ ಅನಂತವೇ ಸರಿ.

## ದಾನ ಪ್ರತಿಗ್ರಹಗಳನ್ನು ಗೌರವದಿಂದ ಮಾಡಬೇಕು

138. ಯೋಽರ್ಚಿತಂ ಪ್ರತಿಗೃಹ್ಣಾತಿ ದದಾತ್ಯರ್ಚಿತಮೇವ ಚ ।
ತಾವುಭೌ ಗಚ್ಛತಃ ಸ್ವರ್ಗಂ ನರಕಂ ತು ವಿಪರ್ಯಯೇ ॥ IV 235

ಗೌರವದಿಂದ ದಾನಕೊಡುವವನು ಮತ್ತು ಗೌರವದಿಂದ ದಾನ ಸ್ವೀಕರಿಸುವವನು ಈ ಇಬ್ಬರೂ ಸ್ವರ್ಗವನ್ನು ಹೊಂದುತ್ತಾರೆ. ಅವಜ್ಞೆಯಿಂದ ದಾನಪ್ರತಿಗ್ರಹಗಳು ನಡೆದಲ್ಲಿ ಆ ಇಬ್ಬರೂ ನರಕದಲ್ಲಿ ಬೀಳುತ್ತಾರೆ.

139 ಯಜ್ಞೋಽನೃತೇನ ಕ್ಷರತಿ ತಪಃ ಕ್ಷರತಿ ವಿಸ್ಮಯಾತ್ ।
ಆಯುರ್ವಿಪ್ರಾಪವಾದೇನ ದಾನಂ ಚ ಪರಿಕೀರ್ತನಾತ್ ॥ -IV 237

ಸುಳ್ಳು ಹೇಳುವುದರಿಂದ ಯಜ್ಞದ ಫಲವು ಕ್ಷಯಿಸುತ್ತದೆ. ಹೆಮ್ಮೆ ಪಡುವುದರಿಂದ ತಪಸ್ಸು ಹಾಳಾಗುತ್ತದೆ. ಬ್ರಾಹ್ಮಣನಿಂದೆಯಿಂದ ಆಯುಷ್ಯವು ಕ್ಷಯಿಸುತ್ತದೆ; ಹೇಳಿಕೊಳ್ಳುವುದರಿಂದ ದಾನದ ಫಲವು ಕಡಿಮೆಯಾಗುತ್ತದೆ.

## ಪ್ರತಿಗ್ರಹ ನಿಷೇಧ

140 ಪ್ರತಿಗ್ರಹಸಮರ್ಥೋಽಪಿ ಪ್ರಸಂಗಂ ತತ್ರ ವರ್ಜಯೇತ್ ।
ಪ್ರತಿಗ್ರಹೇಣ ಹ್ಯಸ್ಯಾಶು ಬ್ರಾಹ್ಮಂ ತೇಜಃ ಪ್ರಶಾಮ್ಯತಿ ॥ -IV 186

ದಾನವನ್ನು ಸ್ವೀಕರಿಸುವವನ ಬ್ರಹ್ಮತೇಜಸ್ಸು ತೀವ್ರಗತಿಯಲ್ಲಿ ನಶಿಸಿಹೋಗುತ್ತದೆ. ಆದ್ದರಿಂದ ಅರ್ಹತೆಯನ್ನು ಹೊಂದಿರುವವನೂ ಕೂಡ ದಾನ ಸ್ವೀಕರಿಸುವ ಕಾರ್ಯದಲ್ಲಿ ಅಭಿಲಾಷೆಯನ್ನು ಹೊಂದದೆ ಅಂತಹ ಪ್ರಸಂಗಗಳಿಂದ ಆದಷ್ಟು ದೂರವಿರಬೇಕು.

## ಅರ್ಹತೆಯಿಲ್ಲದವನು ದಾನವನ್ನು ಸ್ವೀಕರಿಸಬಾರದು

141 ನ ದ್ರವ್ಯಾಣಾಮವಿಜ್ಞಾಯ ವಿಧಿಂ ಧರ್ಮ್ಯಂ ಪ್ರತಿಗ್ರಹೇ ।
ಪ್ರಾಜ್ಞಃ ಪ್ರತಿಗ್ರಹಂ ಕುರ್ಯಾದವಸೀದನ್ನಪಿ ಕ್ಷುಧಾ ॥ IV 187

ಆಯಾ ದ್ರವ್ಯಗಳನ್ನು ಸ್ವೀಕರಿಸಲು ಇರುವ ಶಾಸ್ತ್ರವಿಹಿತವಾದ ವಿಧಿಯನ್ನು ತಿಳಿಯದವನು ಹಸಿವಿನಿಂದ ಬಳಲುತ್ತಿದ್ದರೂ ಸರಿಯೇ, ಆ ದ್ರವ್ಯಗಳನ್ನು ದಾನವಾಗಿ ಸ್ವೀಕರಿಸಬಾರದು.

142 ಅತಪಾಸ್ತ್ವನಧೀಯಾನಃ ಪ್ರತಿಗ್ರಹರುಚಿರ್ದ್ವಿಜಃ ।
ಅಂಭಸ್ಯಶ್ಮಪ್ಲವೇನೇವ ಸಹ ತೇನೈವ ಮಜ್ಜತಿ ॥ -IV 190

ತಪಸ್ಸು, ಅಧ್ಯಯನಗಳನ್ನು ಹೊಂದಿರದೆ ದಾನ ಸ್ವೀಕರಿಸುವಲ್ಲಿ ಮಾತ್ರವೇ ಅಭಿರುಚಿಯನ್ನು ಹೊಂದಿರುವ ದ್ವಿಜನು, ಕಲ್ಲು ದೋಣಿಯಲ್ಲಿ ಕುಳಿತವನು ಅದರೊಂದಿಗೇ ನೀರಿನಲ್ಲಿ ಮುಳುಗಿ ಹೋಗುವಂತೆ ತಾನು ಸ್ವೀಕರಿಸುವ ಆ ವಸ್ತುವಿನ ಸಮೇತವಾಗಿಯೇ ನಾಶಹೊಂದುವನು.

## ಇಂತಹವರಿಗೆ ದಾನ ಕೊಡಕೂಡದು

143 ನ ವಾರ್ಯಪಿ ಪ್ರಯಚ್ಛೇತ್ತು ಬೈಡಾಲವ್ರತಿಕೆ ದ್ವಿಜೇ ।
ನ ಬಕವ್ರತಿಕೇ ವಿಪ್ರೇ ನಾವೇದವಿದಿ ಧರ್ಮವಿತ್ ॥ -IV 192

ಧರ್ಮವನ್ನು ತಿಳಿದವನು ಬಿಡಾಲವ್ರತಿ, ಬಕವ್ರತಿಗಳಿಗೂ, ವೇದ ತಿಳಿಯದ ವಿಪ್ರನಿಗೂ ನೀರನ್ನೂ ಸಹ ದಾನವಾಗಿ ಕೊಡಕೂಡದು

## ಇವುಗಳನ್ನು ಸ್ವೀಕರಿಸುವುದು ದೋಷವಲ್ಲ

144 ಏಧೋದಕಂ ಮೂಲಫಲಮನ್ನಮಭ್ಯುದ್ಯತಂ ಚ ಯತ್ ।
ಸರ್ವತಃ ಪ್ರತಿಗೃಹ್ಣೀಯಾತ್ ಮಧ್ವಥಾಭಯದಕ್ಷಿಣಾಮ್ ॥ -IV 247

---

1 ಅವೈಷ್ಣವಾಯ ದಾತವ್ಯಂ ನೋದಬಿಂದುಂ ನ ತಂಡುಲಮ್ ॥ -(ಸ್ಮೃತಿ)

ಕಟ್ಟಿಗೆ, ನೀರು, ಗೆಡ್ಡೆಗೆಣಸುಗಳು, ಹಣ್ಣುಗಳು, ಆಹಾರಪದಾರ್ಥ, ಜೇನು ಮತ್ತು ಅಭಯ ಇವುಗಳನ್ನು ಯಾರಿಂದ ಬೇಕಾದರೂ ಸ್ವೀಕರಿಸಬಹುದು.

## ಇಂತಹ ಪ್ರತಿಗ್ರಹವು ದೋಷವಲ್ಲ

145 ಗುರೂನ್ ಭೃತ್ಯಾಂಶ್ಚೋಜ್ಜಿಹೀರ್ಷನ್ನರ್ಚಿಷ್ಯನ್ ದೇವತಾತಿಥೀನ್ ।
ಸರ್ವತಃ ಪ್ರತಿಗೃಹ್ಣೀಯಾನ್ನ ತು ತೃಪ್ಯೇತ್ಸ್ವಯಂ ತತಃ ॥ -IV 251

ಗುರುಗಳನ್ನು ಮತ್ತು ಭೃತ್ಯರನ್ನು ಪೋಷಿಸುವ ದೃಷ್ಟಿಯಿಂದಲೂ, ದೇವತೆಗಳನ್ನು ಮತ್ತು ಅತಿಥಿಗಳನ್ನು ಪೂಜಿಸುವ ದೃಷ್ಟಿಯಿಂದಲೂ, ಯಾರಿಂದ ಬೇಕಾದರೂ ದಾನವನ್ನು ಸ್ವೀಕರಿಸಬಹುದು. ಆದರೆ ಆ ರೀತಿ ದಾನ ಪಡೆದ ವಸ್ತುಗಳನ್ನು ತನ್ನ ತೃಪ್ತಿಗಾಗಿ ಮಾತ್ರ ಉಪಯೋಗಿಸಲೇಬಾರದು.

## ವಿಪ್ರರ ಪತನಕ್ಕೆ ಮೂಲಕಾರಣಗಳು

146. ಅನಭ್ಯಾಸೇನ ವೇದಾನಾಮಾಚಾರಸ್ಯ ಚ ವರ್ಜನಾತ್ ।
ಆಲಸ್ಯಾದನ್ನದೋಷಾಚ್ಚ ಮೃತ್ಯುರ್ವಿಪ್ರಾನ್ ಜಿಘಾಂಸತಿ ॥ -V 4

ವೇದಾಭ್ಯಾಸವನ್ನು ಕೈಬಿಡುವುದು, ಸದಾಚಾರವನ್ನು ತ್ಯಜಿಸುವುದು, ಸೋಮಾರಿತನ ಮತ್ತು ಆಹಾರದೋಷ ಈ ಕಾರಣಗಳಿಂದಾಗಿ ಮೃತ್ಯುವು ವಿಪ್ರರನ್ನು ಕೊಲ್ಲಬಯಸುತ್ತದೆ.

## ಇವರಿಗೆಲ್ಲ ಸೂತಕದ ಲೇಪವಿಲ್ಲ

147. ನ ರಾಜ್ಞಾಮಘದೋಷೋಽಸ್ತಿ ವ್ರತೀನಾಂ ನ ಚ ಸತ್ರಿಣಾಂ ।
ಐಂದ್ರಂ ಸ್ಥಾನಮುಪಾಸೀನಾ ಬ್ರಹ್ಮಭೂತಾ ಹಿ ತೇ ಸದಾ ॥ -V 93

ರಾಜರಿಗೆ, ವ್ರತಶೀಲರಿಗೆ ಮತ್ತು ಯಜ್ಞನಿರತರಿಗೆ ಎಂದೂ ಸಹ ಸೂತಕದ ದೋಷವಿಲ್ಲ; ಅವರೆಲ್ಲ ಐಂದ್ರ ಸ್ಥಾನವನ್ನು ಉಪಾಸಿಸುತ್ತಾ ಯಾವಾಗಲೂ ಪರಮಾತ್ಮ ಚಿಂತನೆಯಲ್ಲಿಯೇ ಮಗ್ನರಾಗಿರುವವರು.

## ಶುದ್ಧಿಕಾರಕ ವಸ್ತುಗಳು

148 ಜ್ಞಾನಂ ತಪೋಽಗ್ನಿರಾಹಾರೋ ಮೃನ್ಮನೋ ವಾರ್ಯುಪಾಂಜನಂ ।
ವಾಯುಃ ಕರ್ಮಾರ್ಕಕಾಲೌ ಚ ಶುದ್ಧೇಃ ಕರ್ತೃಣಿ ದೇಹಿನಾಮ್ ॥ -V 105

ಜ್ಞಾನ, ತಪಸ್ಸು, ಬೆಂಕಿ, ಆಹಾರ, ಮೃತ್ತಿಕೆ, ಮನಸ್ಸು, ನೀರು, ಗೋಮಯ, ವಾಯು, ಕರ್ಮ, ಸೂರ್ಯ, ಕಾಲ, ಇವೆಲ್ಲವೂ ಮನುಷ್ಯರಿಗೆ ಶುದ್ಧಿಯನ್ನು ತಂದುಕೊಡುವ ಮುಖ್ಯ ಸಾಧನಗಳು.

## ಯಾರಿಗೆ ಯಾವುದರಿಂದ ಶುದ್ಧಿ

149 ಕ್ಷಾಂತ್ಯಾ ಶುದ್ಧ್ಯಂತಿ ವಿದ್ವಾಂಸೋ ದಾನೇನಾಕಾರ್ಯಕಾರಿಣಃ ।
ಪ್ರಚ್ಛನ್ನಪಾಪಾ ಜಪ್ಯೇನ ತಪಸಾ ವೇದವಿತ್ತಮಾಃ ॥ -V 107

ವಿದ್ವಾಂಸರು ಕ್ಷಮೆಯಿಂದ ಶುದ್ಧರಾಗುತ್ತಾರೆ; ಅಕಾರ್ಯವನ್ನು ಮಾಡಿದವರಿಗೆ ದಾನದಿಂದ ಶುದ್ಧಿಯುಂಟಾಗುತ್ತದೆ; ರಹಸ್ಯವಾಗಿ ಪಾಪ ಮಾಡಿದವರಿಗೆ ಜಪದಿಂದ ಶುದ್ಧಿ; ಶ್ರೇಷ್ಠ ವೇದ ಜ್ಞಾನಿಗಳಿಗೆ ತಪಸ್ಸಿನಿಂದ ಶುದ್ಧಿ

150 ಮೃತ್ತೋಯೈಃ ಶುದ್ಧ್ಯತೇ ಶೋಧ್ಯಂ ನದೀ ವೇಗೇನ ಶುದ್ಧ್ಯತಿ ।
ರಜಸಾ ಸ್ತ್ರೀ ಮನೋದುಷ್ಟಾ ಸನ್ಯಾಸೇನ ದ್ವಿಜೋತ್ತಮಃ ॥ -V 108

ಅಪವಿತ್ರವಾದ ವಸ್ತುವು ಮಣ್ಣು ನೀರುಗಳಿಂದಲೂ, ನದಿಯು ಹರಿಯುವುದರಿಂದಲೂ, ಮನಸ್ಸಿನಲ್ಲಿ ಪಾಪಕಾರ್ಯ ಮಾಡಿದ ಸ್ತ್ರೀಯು ರಜಸ್ಸಿನಿಂದಲೂ, ದ್ವಿಜಶ್ರೇಷ್ಠರು ಸಂನ್ಯಾಸ ಸ್ವೀಕರಿಸುವುದರಿಂದಲೂ ಶುದ್ಧರಾಗುತ್ತಾರೆ.

151 ಅದ್ಭಿರ್ಗಾತ್ರಾಣಿ ಶುದ್ಧ್ಯಂತಿ ಮನಸ್ಸತ್ಯೇನ ಶುದ್ಧ್ಯತಿ ।
ವಿದ್ಯಾತಪೋಭ್ಯಾಂ ಭೂತಾತ್ಮಾ ಬುದ್ಧಿ ಜ್ಞಾನೇನ ಶುದ್ಧ್ಯತಿ ॥ -V 109

ಶರೀರ ನೀರಿನಿಂದ ಶುದ್ಧಿ ಹೊಂದುತ್ತದೆ. ಮನಸ್ಸು ಸತ್ಯದಿಂದ ಶುದ್ಧವಾಗುತ್ತದೆ ಜೀವನು ವಿದ್ಯೆ ಹಾಗೂ ತಪಸ್ಸುಗಳಿಂದ ಶುದ್ಧನಾಗುತ್ತಾನೆ ಬುದ್ಧಿಯು ಜ್ಞಾನದಿಂದ ಶುದ್ಧವಾಗುತ್ತದೆ

152 ತ್ರೀಣಿ ದೇವಾಃ ಪವಿತ್ರಾಣಿ ಬ್ರಾಹ್ಮಣಾನಾಮಕಲ್ಪಯನ್ ।
ಅದೃಷ್ಟಮದ್ಭಿರ್ನಿರ್ಣಿಕ್ತಂ ಯಚ್ಚ ವಾಚಾ ಪ್ರಶಸ್ಯತೇ[1] ॥ -V 127

ಕಾಣದೆ ಇರುವುದು ನೀರಿನಿಂದ ತೊಳೆಯಲ್ಪಟ್ಟದ್ದು, ತಿಳಿದವರಿಂದ 'ಇದು ಪವಿತ್ರ'ವೆಂದು ಕರೆಯಲ್ಪಟ್ಟದ್ದು, ಈ ಮೂರೂ ಸಹ ಬ್ರಾಹ್ಮಣರ ಪಾಲಿಗೆ ಶುದ್ಧವಾದವುಗಳೆಂದೇ ದೇವತೆಗಳು ವಿಧಿಸಿದ್ದಾರೆ.

## ಸ್ತ್ರೀಯರನ್ನು ಗೌರವದಿಂದ ಕಾಣಬೇಕು[2]

153. ಸ್ತ್ರೀಧನಾನಿ ತು ಯೇ ಮೋಹಾದುಪಜೀವಂತಿ ಬಾಂಧವಾಃ ।
ನಾರೀ ಯಾನಾನಿ ವಸ್ತ್ರಂ ವಾ ತೇ ಪಾಪಾ ಯಾಂತ್ಯಧೋಗತಿಮ್ ॥ -III 52

ಸ್ತ್ರೀಯರಿಗೆ ಸೇರಿದ ಸಂಪತ್ತು, ವಾಹನ, ವಸ್ತ್ರ ಮೊದಲಾದವುಗಳನ್ನು ತಮ್ಮ ಜೀವನಕ್ಕಾಗಿ ಉಪಯೋಗಿಸಿಕೊಳ್ಳುವ ಬಂಧುಗಳು ಪಾಪಿಗಳೆನ್ನಿಸಿ ಅಧೋಗತಿಯನ್ನೇ ಹೊಂದುತ್ತಾರೆ.

154. ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।
ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥ -III 56

ಸ್ತ್ರೀಯರು ಗೌರವಿಸಲ್ಪಡುವ ಸ್ಥಳಗಳಲ್ಲಿ ದೇವತೆಗಳು ನಲಿದಾಡುತ್ತಾರೆ. ಸ್ತ್ರೀಯರು ಅನಾದರಕ್ಕೆ ಗುರಿಯಾಗುವ ಸ್ಥಳಗಳಲ್ಲಿ ನಡೆಯುವ ಎಲ್ಲಾ ಸತ್ಕಾರ್ಯಗಳೂ ನಿಷ್ಫಲವೆನ್ನಿಸುತ್ತವೆ.

---

1 ವಿಷ್ಣುವೈಷ್ಣವವಾಕ್ಯೇನ ಹಾನಿಃ ಪಾಪಸ್ಯ ಕರ್ಮಣಃ ।
-ಮ.ಭಾ ತಾ ನಿ. (29/47)

2 ''ಕನ್ಯೋದಿತಾ ಬಲ ಕುಲದ್ವಯತಾರಿಣೀತಿ ಜಾಯಾ ಸಖೇತಿ''
-ಮಹಾಭಾರತ ತಾತ್ಪರ್ಯ ನಿರ್ಣಯ (19/76)

155 ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ಕುಲಂ ।
ನ ಶೋಚಂತಿ ತು ಯತ್ರೈತಾ ವರ್ಧತೇ ತದ್ಧಿ ಸರ್ವದಾ ॥ III 57

ಸ್ತ್ರೀಯರನ್ನು ದುಃಖ ಪಡುವಂತೆ ಮಾಡುವ ಕುಲಗಳು ಬೇಗನೇ ನಾಶ ಹೊಂದುತ್ತವೆ. ಅವರನ್ನು ದುಃಖಪಡದಂತೆ ನೋಡಿಕೊಳ್ಳುವ ಕುಲಗಳು ಸದಾ ಅಭ್ಯುದಯವನ್ನು ಕಾಣುತ್ತವೆ

156 ತಸ್ಮಾದೇತಾಃ ಸದಾ ಪೂಜ್ಯಾ ಭೂಷಣಾಚ್ಛಾದನಾಶನೈಃ ।
ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರೇಷೂತ್ಸವೇಷು ಚ ॥ -III 59

ಆದ್ದರಿಂದ ಅಭ್ಯುದಯವನ್ನು ಬಯಸುವ ಮನುಷ್ಯರು ಎಲ್ಲಾ ಶುಭ ಕಾರ್ಯಗಳಲ್ಲೂ ಸ್ತ್ರೀಯರನ್ನು ಭೂಷಣ, ವಸ್ತ್ರ, ಆಹಾರ ಮೊದಲಾದವುಗಳಿಂದ ಆದರಿಸಬೇಕು.

## ಸ್ತ್ರೀಧರ್ಮಗಳು

157. ಬಾಲ್ಯೇ ಪಿತ್ರುವಶೇ ತಿಷ್ಠೇತ್ ಪಾಣಿಗ್ರಾಹಸ್ಯ ಯೌವನೇ ।
ಪುತ್ರಾಣಾಂ ಭರ್ತರಿ ಪ್ರೇತೇ ನ ಭಜೇತ್ ಸ್ತ್ರೀ ಸ್ವತಂತ್ರತಾಮ್ ॥ -V 148

ಸ್ತ್ರೀಯು ಬಾಲ್ಯದಲ್ಲಿ ತಂದೆ ತಾಯಿಗಳ ವಶದಲ್ಲೂ, ಯೌವನದಲ್ಲಿ ಕೈಹಿಡಿದವನ ವಶದಲ್ಲೂ, ಗಂಡನಿಲ್ಲದಾಗ ಮಕ್ಕಳ ವಶದಲ್ಲೂ ಇರಬೇಕು. ಎಂದೂ ಸ್ವತಂತ್ರಳಾಗಿ ವರ್ತಿಸಕೂಡದು.

158. ಸದಾ ಪ್ರಹೃಷ್ಟಯಾ ಭಾವ್ಯಂ ಗೃಹಕಾರ್ಯೇಷು ದಕ್ಷಯಾ ।
ಸುಸಂಸ್ಕೃತೋಪಸ್ಕರಯಾ ವ್ಯಯೇ ಚಾಮುಕ್ತಹಸ್ತಯಾ ॥ -V 150

ಸ್ತ್ರೀಯು ಸದಾ ಸಂತುಷ್ಟಳಾಗಿಯೂ, ಗೃಹಕೃತ್ಯಗಳಲ್ಲಿ ದಕ್ಷಳಾಗಿಯೂ, ಪಾತ್ರೆ ಮೊದಲಾದ ಉಪಕರಣಗಳನ್ನು ಶುದ್ಧವಾಗಿ ಇರಿಸಿಕೊಂಡವಳಾಗಿಯೂ, ಖರ್ಚು ಮಾಡುವಲ್ಲಿ ವಿವೇಕಿಯಾಗಿಯೂ, ಧಾರಾಳಿಯಾಗಿಯೂ ಇರಬೇಕು.

159 ಉತ್ಪಾದನಮಪತ್ಯಸ್ಯ ಜಾತಸ್ಯ ಪರಿಪಾಲನಮ್ ।

ಪ್ರತ್ಯಹಂ ಲೋಕಯಾತ್ರಾಯಾಃ ಪ್ರತ್ಯಕ್ಷಂ ಸ್ತ್ರೀ ನಿಬಂಧನಮ್ ॥ -IX 27

ಸಂತತಿಯನ್ನು ಪಡೆಯುವುದು, ಅದನ್ನು ಪರಿಪಾಲಿಸುವುದು ಮತ್ತು ಪ್ರತಿನಿತ್ಯ ಸಂಸಾರವನ್ನು ನಿರ್ವಹಿಸುವುದು, ಇವೆಲ್ಲ ಸ್ತ್ರೀಯ ಪಾಲಿನ ಮುಖ್ಯ ಧರ್ಮಗಳು.

160. ಪತಿಂ ಯಾ ನಾಭಿಚರತಿ ಮನೋವಾಗ್ದೇಹಸಂಯುತಾ ।

ಸಾ ಭರ್ತೃಲೋಕಾನಾಪ್ನೋತಿ ಸದ್ಭಿಃ ಸಾಧ್ವೀತಿ ಚೋಚ್ಯತೇ ॥ -IX 29

ಮನಸ್ಸು, ಮಾತು ಮತ್ತು ದೇಹ ಈ ಮೂರರಿಂದಲೂ ಪತಿಗೆ ದ್ರೋಹ ಬಗೆಯದ ಸ್ತ್ರೀಯು ಪತಿಯು ಪಡೆಯುವ ಶ್ರೇಷ್ಠಲೋಕಗಳನ್ನೇ ತಾನೂ ಪಡೆಯುತ್ತಾಳೆ. ಸಜ್ಜನರಿಂದ 'ಸಾಧ್ವೀ' ಎಂದೂ ಕರೆಯಲ್ಪಡುತ್ತಾಳೆ

161. ನಾಸ್ತಿ ಸ್ತ್ರೀಣಾಂ ಪೃಥಗ್ ಯಜ್ಞೋ ನ ವ್ರತಂ ನಾಪ್ಯುಪೋಷಿತಂ ।

ಪತಿಂ ಶುಶ್ರೂಷತೇ ಯೇನ ತೇನ ಸ್ವರ್ಗೇ ಮಹಿಯತೇ ॥ -VI 55

ಸ್ತ್ರೀಯರಿಗೆ ಪ್ರತ್ಯೇಕವಾದ ಯಜ್ಞವಾಗಲೀ, ವ್ರತವಾಗಲೀ ಉಪವಾಸವಾಗಲೀ ವಿಧಿಸಲ್ಪಟ್ಟಿಲ್ಲ. ಪತಿಶುಶ್ರೂಷೆಯನ್ನು ಮಾಡುವ ಮೂಲಕವೇ ಅವರು ಸ್ವರ್ಗದಲ್ಲಿ ಪೂಜಿತರಾಗುತ್ತಾರೆ. (ಏಕಾದಶೀ, ಕೃಷ್ಣಾಷ್ಟಮಿ, ಚಾತುರ್ಮಾಸ್ಯಾದಿ ವ್ರತಗಳು ಮಾತ್ರ ಸ್ತ್ರೀಯರಿಗೂ ಕಡ್ಡಾಯ).

162. ಅರ್ಥಸ್ಯ ಸಂಗ್ರಹೇ ಚೈನಾಂ ವ್ಯಯೇ ಚೈವ ನಿಯೋಜಯೇತ್ ।

ಶೌಚೇ ಧರ್ಮೇಽನ್ನ ಪಕ್ತ್ಯಾಂ ಚ ಪಾರಿಣಾಹ್ಯಸ್ಯ ಚೇಕ್ಷಣೇ ॥ -IX 11

ಹಣವನ್ನು ಸಂಗ್ರಹಿಸುವ ಹಾಗೂ ಅದನ್ನು ಯೋಗ್ಯ ರೀತಿಯಲ್ಲಿ ವೆಚ್ಚ ಮಾಡುವ ಕಾರ್ಯದಲ್ಲಿ ಪತಿಯು ತನ್ನ ಪತ್ನಿಯನ್ನು ನಿಯೋಜಿಸಬೇಕು ಮನೆಯ ಶುದ್ಧಿ, ಧರ್ಮಕಾರ್ಯ, ಅಡುಗೆ ಪಾತ್ರೆ ಮೊದಲಾದವುಗಳ ಮೇಲ್ವಿಚಾರಣೆ ಮುಂತಾದ ಕಾರ್ಯಗಳಲ್ಲೂ ಪತ್ನಿಯನ್ನು ತೊಡಗಿಸಬೇಕು.

## ಸ್ತ್ರೀಯರ ಅಧಃಪತನಕ್ಕೆ ಮುಖ್ಯ ಕಾರಣಗಳು

163 ಪಾನಂ ದುರ್ಜನಸಂಸರ್ಗಃ [1]ಪತ್ಯಾ ಚ ವಿರಹೋಽಟನಮ್ ।
ಸ್ವಪ್ನೋಽನ್ಯಗೇಹವಾಸಶ್ಚ ನಾರೀಸಂದೂಷಣಾನಿ ಷಟ್[2] ॥ -XI 13

ಮದ್ಯಪಾನ, ದುಷ್ಟಜನರ ಸಹವಾಸ, ಪತಿವಿರಹ, ಅಲೆದಾಟ, ಅತಿನಿದ್ರೆ ಮತ್ತು ಪರಗೃಹವಾಸ ಈ ಆರೂ ಸ್ತ್ರೀಯರು ಕೆಡಲು ಕಾರಣವಾಗುತ್ತದೆ.

## ಸ್ವರಕ್ಷಣೆಯು ಸ್ತ್ರೀಯರಿಗೆ ಕಷ್ಟಸಾಧ್ಯ

164 ಪಿತಾ ರಕ್ಷತಿ ಕೌಮಾರೇ ಭರ್ತಾ[3] ರಕ್ಷತಿ ಯೌವನೇ ।
ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ -IX 3

ಬಾಲ್ಯದಲ್ಲಿ ತಂದೆಯು ರಕ್ಷಿಸುತ್ತಾನೆ; ಯೌವನದಲ್ಲಿ ಪತಿಯು ರಕ್ಷಿಸುತ್ತಾನೆ; ವೃದ್ಧಾಪ್ಯದಲ್ಲಿ ಮಕ್ಕಳು ರಕ್ಷಿಸುತ್ತಾರೆ; ಸ್ತ್ರೀಯು ತನ್ನ ರಕ್ಷಣೆಯ ವಿಷಯದಲ್ಲಿ ಸ್ವಾತಂತ್ರ್ಯವಹಿಸುವುದು ಎಂದೂ ಉಚಿತವಲ್ಲ.

165. ಕಾಲೇಽದಾತಾ ಪಿತಾ ವಾಚ್ಯೋ ವಾಚ್ಯಶ್ಚಾನುಪಯನ್ ಪತಿಃ ।
ಮೃತೇ ಭರ್ತರಿ ಪುತ್ರಸ್ತು ವಾಚ್ಯೋ ಮಾತುರರಕ್ಷಿತಾ ॥ -IX 4

ಯೋಗ್ಯಕಾಲದಲ್ಲಿ ಮಗನಿಗೆ ಉಪನಯನ, ಮಗಳಿಗೆ ವಿವಾಹಮಾಡಿಕೊಡದ ತಂದೆಯು ಅಪರಾಧಿ. ಪತ್ನಿಯೊಂದಿಗೆ ಸರಿಯಾಗಿ ವರ್ತಿಸದ ಗಂಡನು ಅಪರಾಧಿ, ಗಂಡನಿಲ್ಲದ ಸ್ತ್ರೀಯನ್ನು ಪಾಲಿಸದ ಮಗನೂ ನಿಂದ್ಯನೇ.

## ಪತ್ನಿಯ ರಕ್ಷಣೆಯು ಪತಿಯ ಕರ್ತವ್ಯ

166 ದೇವದತ್ತಾಂ ಪತಿರ್ಭಾರ್ಯಾಂ ವಿಂದತೇ ನೇಚ್ಛಯಾಽತ್ಮನಃ ।
ತಾಂ ಸಾಧ್ವೀಂ ಬಿಭೃಯಾನ್ನಿತ್ಯಂ ದೇವಾನಾಂ ಪ್ರಿಯಮಾಚರನ್ ॥ -IX 95

---

1 ಒಂಟಿಯಲಿ ಹೆಂಡತಿಯ ಬಿಡುವಾತನೇ ಮೂರ್ಖ ।
-ಶ್ರೀ ಪುರಂದರದಾಸರು (5/16/26)

2 ನ ಸುತೋ ದಾರದೂಷಣೇ । (21/372)

3 ಭರ್ತಾ ನಾಮ ಪರಂ ನಾರ್ಯಾ ಭೂಷಣಾದಪಿ ಭೂಷಣಮ್ ।
-ವಾಲ್ಮೀಕಿರಾಮಾಯಣ

ಪತಿಯು ದೈವ ಕರುಣಿಸುವ ಪತ್ನಿಯನ್ನು ಪಡೆಯುತ್ತಾನೆಯೇ ಹೊರತು ತನ್ನ ಇಚ್ಛೆಯಂತಲ್ಲ, ಆದ್ದರಿಂದ ಆ ಸಾಧ್ವಿಯನ್ನು ನಿತ್ಯವೂ ಚೆನ್ನಾಗಿ ರಕ್ಷಿಸುವುದು ಅವನ ಪಾಲಿನ ಮುಖ್ಯ ಕರ್ತವ್ಯ ಅದು ದೇವತೆಗಳ ಮೆಚ್ಚುಗೆಗೂ ಕಾರಣವಾಗುತ್ತದೆ.

167 [1]ಸ್ವಾಂ ಪ್ರಸೂತಿಂ ಚರಿತ್ರಂ ಚ ಕುಲಮಾತ್ಮಾನಮೇವ ಚ ।
ಸ್ವಂ ಚ ಧರ್ಮಂ ಪ್ರಯತ್ನೇನ ಜಾಯಾಂ ರಕ್ಷನ್ ಹಿ ರಕ್ಷತಿ ॥ -IX 7

ಸಾಧ್ಯವಿರುವಷ್ಟರ ಮಟ್ಟಿಗೆ ಪ್ರಯತ್ನ ಪೂರ್ವಕವಾಗಿ ಹೆಂಡತಿಯನ್ನು ರಕ್ಷಿಸುವುದರಿಂದ ಮಾತ್ರವೇ, ತನ್ನ ಸಂತಾನ, ಕುಲ, ಶೀಲ, ಧರ್ಮ ಮತ್ತು ಆತ್ಮಗಳನ್ನು ರಕ್ಷಿಸಿಕೊಳ್ಳುವುದು ಸಾಧ್ಯ.

## ಈ ಮೂರನ್ನು ಮತ್ತೊಮ್ಮೆ ಮಾಡುವಂತಿಲ್ಲ

168. [2]ಸಕೃದಂಶೋ ನಿಪತತಿ ಸಕೃತ್ಕನ್ಯಾ ಪ್ರದೀಯತೇ ।
ಸಕೃದಾಹ ದದಾನೀತಿ ತ್ರೀಣ್ಯೇತಾನಿ ಸತಾಂ ಸಕೃತ್ ॥ -IX 47

ಆಸ್ತಿವಿಭಜನೆಯಾಗುವುದು ಒಂದು ಸಲ, ಕನ್ಯಾದಾನ ಮಾಡುವುದು ಒಂದು ಸಲ, ದಾನ ಕೊಡುವುದು ಒಂದು ಸಲ. ಈ ಮೂರೂ ಸಹ ಒಮ್ಮೆ ಮಾತ್ರವೇ ನಡೆಯಬೇಕು ಎಂದು ಸಜ್ಜನರ ಅಭಿಪ್ರಾಯ.

## ಕಪಟವಿವಾಹವು ಊರ್ಜಿತವಾಗದು

169. ವಿಧಿವತ್ ಪ್ರತಿಗೃಹ್ಯಾಪಿ ತ್ಯಜೇತ್ ಕನ್ಯಾಂ ವಿಗರ್ಹಿತಾಮ್ ।
ವ್ಯಾಧಿತಾಂ ವಿಪ್ರದುಷ್ಟಾಂ ವಾ ಛದ್ಮನಾ ಚೋಪಪಾದಿತಾಮ್ ॥ -IX 72

---

1 ದುಷ್ಟದಾರೋ ನ ಚಾಪ್ನೋತಿ ಲೋಕಾನರ್ಥೋ ಹಿ ದೂಷಿತಃ ।
ಅರಕ್ಷಣಾದ್ದೂಷಿತಾಯಾ ನ ತ್ಯಾಗಾಚ್ಚ ಶುಭಂ ಭವೇತ್ ॥
-ಮ ಭಾ.ತಾ.ನಿ. (21/373)

2 ಈ ಶ್ಲೋಕವು ಮಹಾಭಾರತದಲ್ಲೂ ಬರುತ್ತದೆ
-(ವನಪರ್ವ 294/26)

ಕನ್ಯೆಯಲ್ಲಿನ ಪ್ರಬಲ ರೋಗಗಳನ್ನಾಗಲೀ ಅಥವಾ ಶೀಲಭ್ರಷ್ಟತೆಯನ್ನಾಗಲೀ ಮುಂಚಿತವಾಗಿ ತಿಳಿಸದೆ ವಿವಾಹ ಮಾಡಿಕೊಟ್ಟಿದ್ದಲ್ಲಿ, ಅಂತಹ ವಿವಾಹ ಎಷ್ಟೇ ವಿಧ್ಯುಕ್ತವಾಗಿ ನಡೆದಿದ್ದರೂ ಊರ್ಜಿತವೆನ್ನಿಸುವುದಿಲ್ಲ, ಪತಿಯು ಇಷ್ಟಪಟ್ಟಲ್ಲಿ ಅವಳನ್ನು ತ್ಯಜಿಸಿಬಿಡಬಹುದು.

## ದಂಪತಿಗಳ ಅನ್ಯೋನ್ಯತೆ

170 [1]ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ।
ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಮ್ ॥ -III 60

ಪತ್ನಿಯಿಂದ ಪತಿಯೂ, ಪತಿಯಿಂದ ಪತ್ನಿಯೂ ತೃಪ್ತಿಯನ್ನು ಕಾಣುವ ಸಂಸಾರದಲ್ಲಿ ಸದಾ ಸುಖ ಶಾಂತಿಗಳು ನೆಲೆಸುತ್ತವೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

171 ಯಾದೃಗ್ಗುಣೇನ ಭರ್ತ್ರಾ ಸ್ತ್ರೀ ಸಂಯುಜ್ಯೇತ ಯಥಾವಿಧಿ ।
ತಾದೃಗ್ಗುಣಾ ಸಾ ಭವತಿ ಸಮುದ್ರೇಣೇವ ನಿಮ್ನಗಾ ॥ -IX 22

ಸಮುದ್ರದೊಂದಿಗೆ ಸೇರುವ ನದಿಯು ಸಮುದ್ರದ ಗುಣಗಳನ್ನೇ ತಾನೂ ಹೊಂದುವಂತೆ ವಿಧ್ಯುಕ್ತ ರೀತಿಯಲ್ಲಿ ವಿವಾಹ ಮಾಡಿಕೊಡಲ್ಪಟ್ಟ ಸ್ತ್ರೀಯು ತನ್ನ ಪತಿಯ ಗುಣಗಳನ್ನೇ ತಾನೂ ಪಡೆದುಕೊಳ್ಳುತ್ತಾಳೆ.

## ವ್ಯಭಿಚಾರವು ಹೇಯ

172 [2]ವ್ಯಭಿಚಾರಾತ್ತು ಭರ್ತುಃ ಸ್ತ್ರೀ ಲೋಕೇ ಪ್ರಾಪ್ನೋತಿ ನಿಂದ್ಯತಾಂ ।
ಶೃಗಾಲಯೋನಿಂ ಪ್ರಾಪ್ನೋತಿ ಪಾಪರೋಗೈಶ್ಚ ಪೀಡ್ಯತೇ ॥ V 164

ಪತಿಗೆ ದ್ರೋಹ ಬಗೆಯುವ ಸ್ತ್ರೀಯು ಲೋಕದಲ್ಲಿ ನಿಂದೆಗೆ ಗುರಿಯಾಗುತ್ತಾಳೆ; ಅನೇಕ ಕೆಟ್ಟ ರೋಗಗಳಿಗೂ ಈಡಾಗುತ್ತಾಳೆ; ಮುಂದೆ ನರಿಯ ಜನ್ಮವನ್ನು ಸಹ ಹೊಂದುತ್ತಾಳೆ.

---

1 ಸ್ವೀಯಪುನ್ನಿಯತಿಃ ಸ್ತ್ರೀಣಾಂ ಸ್ವದಾರನಿಯತಿರ್ನೃಣಾಂ- ಧರ್ಮಃ ।
-ಮ.ಭಾ.ತಾ.ನಿ (29/35)

2 ಅಧೋಽಧೋಽಧಿಕಃ ದೋಷಃ ಸ್ಯಾತ್ ಸ್ತ್ರೀಣಾಮನ್ಯತ್ರ ಮಧ್ವತಃ ।
-ಮಹಾಭಾರತತಾತ್ಪರ್ಯ ನಿರ್ಣಯ (29/37)

173. ನ ಹೀದೃಶಮನಾಯುಷ್ಯಂ ಲೋಕೇ ಕಿಂಚನ ವಿದ್ಯತೇ ।
ಯಾದೃಶಂ ಪುರುಷಸ್ಯೇಹ ಪರದಾರೋಪಸೇವನಮ್ ॥ -IV 134

ಪರಸ್ತ್ರೀಲೋಲುಪನಾಗುವದಕ್ಕಿಂತಲೂ ಹೆಚ್ಚಿನದಾದ ಆಯುಷ್ಯನಾಶಕವಾದ ಪಾಪಕಾರ್ಯವು ಪುರುಷನಿಗೆ ಈ ಲೋಕದಲ್ಲಿ ಬೇರಾವುದೂ ಇಲ್ಲ.

## ಪುತ್ರನ ಲಕ್ಷಣ

174. [2]ಪುನ್ನಾಮ್ನೋ ನರಕಾದ್ಯಸ್ಮಾತ್ತ್ರಾಯತೇ ಪಿತರಂ ಸುತಃ ।
ತಸ್ಮಾತ್ ಪುತ್ರ ಇತಿ ಪ್ರೋಕ್ತಃ ಸ್ವಯಮೇವ ಸ್ವಯಂಭುವಾ ॥ -IX 138

'ಪುತ್' ಎಂಬ ಹೆಸರಿನ ನರಕದಿಂದ ತಂದೆಯನ್ನು ಕಾಪಾಡುವ ಕಾರಣದಿಂದ ಮಗನಿಗೆ 'ಪುತ್ರ' ಎಂಬ ಹೆಸರು ಬ್ರಹ್ಮದೇವನಿಂದ ವಿಧಿಸಲ್ಪಟ್ಟಿದೆ.

## ದುಷ್ಟಪುತ್ರನಿಂದ ಉದ್ಧಾರವು ಅಸಾಧ್ಯ

175 ಯಾದೃಶಂ ಫಲಮಾಪ್ನೋತಿ ಕುಪ್ಲವೈಃ ಸಂತರನ್ ಜಲಮ್ ।
ತಾದೃಶಂ ಫಲಮಾಪ್ನೋತಿ ಕುಪುತ್ರೈಃ ಸಂಚರನ್ ತಮಃ ॥ -IX 161

ಕೆಟ್ಟ ದೋಣಿಗಳಿಂದ ನೀರನ್ನು ದಾಟುವವನು ಎಂತಹ ಫಲವನ್ನು ಹೊಂದುವನೋ ಅಂತಹ ಫಲವನ್ನೇ ದುಷ್ಟಪುತ್ರರೊಂದಿಗೆ ಕೂಡಿರುವ ತಂದೆಯೂ ಪಡೆಯುವನು.

## ಗೃಹಸ್ಥಾಶ್ರಮದ ಹಿರಿಮೆ

176. ಯಥಾ ವಾಯುಂ ಸಮಾಶ್ರಿತ್ಯ ವರ್ತಂತೇ ಸರ್ವಜಂತವಃ ।
ತಥಾ ಗೃಹಸ್ಥಮಾಶ್ರಿತ್ಯ ವರ್ತಂತೇ ಸರ್ವ ಆಶ್ರಮಾಃ ॥ -III 77

ಎಲ್ಲಾ ಪ್ರಾಣಿಗಳೂ ಹೇಗೆ ವಾಯುವನ್ನೇ ಆಶ್ರಯಿಸಿ ಬದುಕಿವೆಯೋ ಹಾಗೆ ಇತರ ಎಲ್ಲಾ ಆಶ್ರಮಗಳೂ ಗೃಹಸ್ಥನನ್ನೇ ಅವಲಂಬಿಸಿಕೊಂಡಿವೆ.

---

1 ವ್ಯಭಿಚಾರಿಗಳಾದ ಸ್ತ್ರೀಪುರುಷರಿಗೆ 'ತಪ್ತಸೂರ್ಮಿ' ಎಂಬ ನರಕವಾಗುವುದೆಂದು ಭಾಗವತಪುರಾಣದಲ್ಲಿ ಉಕ್ತವಾಗಿದೆ.

2 ತ್ರಾತಾ ಯ ಏವ ನರಕಾತ್ ನ ಹಿ ಪುತ್ರನಾಮಾ । -ಸುಮಧ್ವವಿಜಯ (II 17)

177 ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ ।
ಏತೇ ಗೃಹಸ್ಥಪ್ರಭವಾಶ್ಚತ್ವಾರಃ ಪೃಥಗಾಶ್ರಮಾಃ ॥ -VI 87

ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಹಾಗೂ ಯತಿ ಈ ನಾಲ್ಕೂ ಆಶ್ರಮಗಳೂ ಗೃಹಸ್ಥನನ್ನೇ ಆಶ್ರಯಿಸಿವೆ.

178 ಯಥಾ ನದೀನದಾಃ ಸರ್ವೇ ಸಾಗರೇ ಯಾಂತಿ ಸಂಸ್ಥಿತಿಮ್ ।
ತಥೈವಾಶ್ರಮಿಣಃ ಸರ್ವೇ ಗೃಹಸ್ಥೇ ಯಾಂತಿ ಸಂಸ್ಥಿತಿಮ್ ॥ -VI 90

ಪೂರ್ವದಿಂದ ಪಶ್ಚಿಮಕ್ಕೂ, ಪಶ್ಚಿಮದಿಂದ ಪೂರ್ವಕ್ಕೂ ಹರಿಯುವ ಎಲ್ಲಾ ನದಿಗಳೂ ಹೇಗೆ ಸಾಗರದಲ್ಲೇ ನೆಲೆಗೊಳ್ಳುವವೋ, ಹಾಗೆ ಎಲ್ಲಾ ಆಶ್ರಮದವರೂ ಗೃಹಸ್ಥನಲ್ಲೇ ಅವಲಂಬನವನ್ನು ಹೊಂದಿದ್ದಾರೆ

## ಧರ್ಮಾನುಷ್ಠಾನವು ಎಲ್ಲಾ ಆಶ್ರಮಗಳಿಗೂ ವಿಹಿತ

179 ಚತುರ್ಭಿರಪಿ ಚೈವೈತೈರ್ನಿತ್ಯಮಾಶ್ರಮಭಿರ್ದ್ವಿಜೈಃ ।
*ದಶಲಕ್ಷಣಕೋ ಧರ್ಮಃ ಸೇವಿತವ್ಯಃ ಪ್ರಯತ್ನತಃ ॥ -VI 91

ನಾಲ್ಕೂ ಆಶ್ರಮಗಳಿಗೆ ಸೇರಿದ ಎಲ್ಲಾ ದ್ವಿಜರಿಂದಲೂ ಹತ್ತು ವಿಧವಾದ ಧರ್ಮವು ಪ್ರಯತ್ನ ಪೂರ್ವಕವಾಗಿ ಆಚರಿಸಲ್ಪಡಬೇಕು.

## ಎಲ್ಲಾ ಆಶ್ರಮಗಳಿಂದಲೂ ಸದ್ಗತಿಯು ಸಾಧ್ಯ

180 ಸರ್ವೇಽಪಿ ಕ್ರಮಶಸ್ತ್ವೇತೇ ಯಥಾಶಾಸ್ತ್ರಂ ನಿಷೇವಿತಾಃ ।
ಯಥೋಕ್ತಕಾರಿಣಂ ವಿಪ್ರಂ ನಯಂತಿ ಪರಮಾಂ ಗತಿಮ್ ॥ VI 88

ಶಾಸ್ತ್ರಕ್ಕೆ ಅನುಸಾರವಾಗಿ ನಡೆದುಕೊಳ್ಳುತ್ತಿದ್ದರೆ, ಈ ನಾಲ್ಕರಲ್ಲಿ ಯಾವುದೇ ಆಶ್ರಮವೂ ಸದ್ಗತಿಗೆ ಕಾರಣವಾಗುತ್ತದೆ

## ಲಾಂಛನಗಳನ್ನು ಧರಿಸಿದ ಮಾತ್ರಕ್ಕೆ ಧರ್ಮವನ್ನು ಆಚರಿಸಿದಂತಾಗುವುದಿಲ್ಲ

181 ದೂಷಿತೋಽಪಿ ಚರೇದ್ಧರ್ಮಂ ಯತ್ರ ತತ್ರಾಶ್ರಮೇ ರತಃ ।
ಸಮಃ ಸರ್ವೇಷು ಭೂತೇಷು ನ ಲಿಂಗಂ ಧರ್ಮಕಾರಣಮ್ ॥ -VI 66

---

* ಧರ್ಮದ ದಶಲಕ್ಷಣಗಳಿಗೆ ಶ್ಲೋ 8 (VI 92) ನೋಡಿ.

[1]ಸ್ವಲ್ಪ ತಪ್ಪಿದ್ದರೂ ಚಿಂತೆಯಿಲ್ಲ, ತಾನಿರುವ ಆಶ್ರಮಕ್ಕೆ ಉಚಿತವಾದ ಧರ್ಮಗಳನ್ನೇ ಯಾವಾಗಲೂ ಆಚರಿಸಬೇಕು ಎಲ್ಲಾ ಪ್ರಾಣಿಗಳನ್ನೂ ಉಚಿತವಾದ ರೀತಿಯಲ್ಲಿ ಕಾಣಬೇಕು, ಪಕ್ಷಪಾತವನ್ನು ಮಾಡಕೂಡದು. ಲಾಂಛನಗಳನ್ನು ಧರಿಸಿಕೊಂಡ ಮಾತ್ರಕ್ಕೇ ಧರ್ಮವನ್ನು ಆಚರಿಸಿದ ಪುಣ್ಯವು ಲಭಿಸುವುದಿಲ್ಲ.

182. ಫಲಂ ಕತಕವೃಕ್ಷಸ್ಯ ಯದ್ಯಪ್ಯಂಬುಪ್ರಸಾದಕಮ್ ।
ನ ನಾಮಗ್ರಹಣಾದೇವ ತಸ್ಯ ವಾರಿ ಪ್ರಸೀದತಿ ॥ -VI 67

ಕತಕವೃಕ್ಷದ ಫಲವು ನೀರನ್ನು ಶುದ್ಧಿಗೊಳಿಸುವುದೇನೋ ನಿಜ. ಅಂದ ಮಾತ್ರಕ್ಕೆ ಅದರ ಹೆಸರನ್ನು ಉಚ್ಚರಿಸಿದ ಮಾತ್ರಕ್ಕೆ ನೀರು ನಿರ್ಮಲವಾದೀತೇ?

## ದಂಡದ ಹಿರಿಮೆ

183. ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾಭಿರಕ್ಷತಿ ।
ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ॥ VII 18

ದಂಡವೇ ಎಲ್ಲಾ ಪ್ರಜೆಗಳನ್ನು ಆಳುತ್ತದೆ. ಎಲ್ಲರನ್ನೂ ದಂಡವೇ ರಕ್ಷಿಸುತ್ತದೆ ಉಳಿದೆಲ್ಲರೂ ಮಲಗಿರುವಾಗಲೂ ದಂಡವು ಎಚ್ಚೆತ್ತಿರುತ್ತದೆ. ಅವಶ್ಯವಾದಾಗ ದಂಡವನ್ನು ಧರ್ಮವೆಂದೇ ಜ್ಞಾನಿಗಳು ಹೇಳುತ್ತಾರೆ.

## ದಂಡದ ಪ್ರಯೋಗಕ್ಕೆ ಜ್ಞಾನದ ಹಿನ್ನೆಲೆಯು ಅತ್ಯವಶ್ಯ

184 ಸಮೀಕ್ಷ್ಯ ಸ ಧೃತಃ ಸಮ್ಯಕ್ ಸರ್ವಾ ರಂಜಯತಿ ಪ್ರಜಾಃ ।
ಅಸಮೀಕ್ಷ್ಯ ಪ್ರಣೀತಸ್ತು ವಿನಾಶಯತಿ ಸರ್ವತಃ ॥ VII 19

ವಿಚಾರ ಪೂರ್ವಕವಾಗಿ ಸರಿಯಾದ ರೀತಿಯಲ್ಲಿ ಪ್ರಯೋಗಿಸಲ್ಪಟ್ಟ ದಂಡವು ಎಲ್ಲಾ

---

1 ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥
-ಗೀತಾ (18/48

ಪ್ರಜೆಗಳನ್ನೂ ಸುಖಿಗಳನ್ನಾಗಿಸುತ್ತದೆ. ಆದರೆ ಅದೇ ದಂಡವು ತಪ್ಪಾಗಿ ಪ್ರಯೋಗಿಸಲ್ಪಟ್ಟಾಗ ಸರ್ವನಾಶಕ್ಕೂ ಕಾರಣವಾಗುತ್ತದೆ.

## ನ್ಯಾಯಬಾಹಿರವಾದ ದಂಡನೆಯು ಅನರ್ಥಕಾರಿ

185 ದುಷ್ಯೇಯುಃ ಸರ್ವವರ್ಣಾಶ್ಚ ಭಿದ್ಯೇರನ್ ಸರ್ವಸೇತವಃ ।
ಸರ್ವಲೋಕಪ್ರಕೋಪಶ್ಚ ಭವೇದ್ದಂಡಸ್ಯ ವಿಭ್ರಮಾತ್ ॥ -VII 24

ತಪ್ಪಾಗಿ ಪ್ರಯೋಗಿಸಲ್ಪಟ್ಟ ದಂಡದಿಂದಾಗಿ ಎಲ್ಲಾ ವರ್ಣಗಳೂ ಕೆಡುತ್ತವೆ, ಎಲ್ಲಾ ಧಾರ್ಮಿಕ ಕಟ್ಟಳೆಗಳೂ ಸಡಿಲವಾಗುತ್ತವೆ; ಸರ್ವಲೋಕಗಳೂ ಅಸ್ತವ್ಯಸ್ತವಾಗುತ್ತವೆ

186. ದಂಡೋ ಹಿ ಸುಮಹತ್ತೇಜೋ ದುರ್ಧರಶ್ಚಾಕೃತಾತ್ಮಭಿಃ ।
ಧರ್ಮಾದ್ವಿಚಲಿತಂ ಹಂತಿ ನೃಪಮೇವ ಸಬಾಂಧವಮ್ -VII 28

ದಂಡದ ತೇಜಸ್ಸು ಅತ್ಯದ್ಭುತವಾದದ್ದು; ಆದರೆ ಅವಿವೇಕಿಗಳಾದವರಿಂದ ಅದನ್ನು ಯೋಗ್ಯ ರೀತಿಯಲ್ಲಿ ಪ್ರಯೋಗಿಸುವುದು ಅಸಾಧ್ಯವಾದ ಕೆಲಸ ಧರ್ಮಬಾಹಿರವಾದ ದಂಡನೆಯು ಪ್ರಯೋಗಿಸಿದವರನ್ನೇ ಬಾಂಧವಸಮೇತವಾಗಿಯೇ ನಾಶ ಮಾಡಿಬಿಡುತ್ತದೆ.

## ನ್ಯಾಯಬಾಹಿರವಾದ ದಂಡನೆಯು ಸಲ್ಲದು

187 [1]ಅಧರ್ಮದಂಡನಂ ಲೋಕೇ ಯಶೋಘ್ನಂ ಕೀರ್ತಿನಾಶನಮ್ ।
ಅಸ್ವರ್ಗ್ಯಂ ಚ ಪರತ್ರಾಪಿ ತಸ್ಮಾತ್ ತತ್ಪರಿವರ್ಜಯೇತ್ ॥ -VIII 12

ಧರ್ಮಕ್ಕೆ ವಿರುದ್ಧವಾದ ರೀತಿಯಲ್ಲಿ ದಂಡಿಸುವುದು ಲೋಕದಲ್ಲಿ ಕೀರ್ತಿ ನಾಶಕವಾದ ಕಾರ್ಯ. ಆದರಿಂದ ಮುಂದೆಯೂ ಯಶಸ್ಸು ದೊರೆಯುವುದಿಲ್ಲ.

---

[1] ಶಾರೀರದಂಡಸಂತ್ಯಾಗಃ ಪುತ್ರಭಾರ್ಯಾದಿಕಾನ್ಯತೇ ।
ತತ್ರಾಪಿ ನಾಂಗಹಾನಿಃ ಸ್ಯಾದ್ ವೇದನಾ ವಾ ಚಿರಂ ನ ತು ॥
ನ ಚಾರ್ಥದಂಡಃ ಕರ್ತವ್ಯೋ ವಿಪ್ರವೈಶ್ಯಾದಿಭಿಃ ಕ್ವಚಿತ್ ।
ಶಾರೀರದಂಡವಿಷಯೇ ವೈಶ್ಯಾದೀನಾಂ ಚ ವಿಪ್ರವತ್ ॥
-ಮಹಾಭಾರತತಾತ್ಪರ್ಯನಿರ್ಣಯ (29/24,25)

ಮರಣಾನಂತರ ಸ್ವರ್ಗಕ್ಕೂ ಅಡ್ಡಿಯಾಗುತ್ತದೆ. ಆದ್ದರಿಂದ ಎಂದೂ ಧರ್ಮಕ್ಕೆ ಸಂಮತವಲ್ಲದ ರೀತಿಯಲ್ಲಿ ದಂಡಿಸಕೂಡದು.

188 [1]ಅದಂಡ್ಯಾನ್ ದಂಡಯನ್ ರಾಜಾ ದಂಡ್ಯಾಶ್ಚೈವಾಪ್ಯದಂಡಯನ್ ।
ಅಯಶೋ ಮಹದಾಪ್ನೋತಿ ನರಕಂ ಚೈವ ಗಚ್ಛತಿ ॥ -VIII 128

ದಂಡನೆಗೆ ಅರ್ಹರಾದವರನ್ನು ಶಿಕ್ಷಿಸದೆ ಬಿಡುವುದರಿಂದಲೂ ಅನರ್ಹರಾದವರನ್ನು ಶಿಕ್ಷಿಸುವುದರಿಂದಲೂ, ರಾಜನು ಘೋರವಾದ ಅಪಕೀರ್ತಿಗೆ ಗುರಿಯಾಗುತ್ತಾನೆ, ಸತ್ತಮೇಲೆ ನರಕವು ಸಹ ಅವನಿಗೆ ತಪ್ಪಿದ್ದಲ್ಲ.

## ದಂಡಿಸುವ ರೀತಿ

189. [2]ವಾಗ್ದಂಡಂ ಪ್ರಥಮಂ ಕುರ್ಯಾದ್ಧಿಗ್ದಂಡಂ ತದನಂತರಮ್ ।
ತೃತೀಯಂ ಧನದಂಡಂ ತು ವಧದಂಡಮತಃ ಪರಮ್ ॥ -VIII 129

ಅಪರಾಧಗಳ ತೀವ್ರತೆಗನುಸಾರವಾಗಿ ಮೊದಲಿಗೆ ವಾಗ್ದಂಡವನ್ನೂ ಅನಂತರ ಧಿಗ್ದಂಡವನ್ನೂ ವಿಧಿಸಬೇಕು. ಧನದಂಡವು ಮುಂದಿನ ಹೆಜ್ಜೆ; ಕೊನೆಗೆ ಮರಣದಂಡನೆಯನ್ನು ವಿಧಿಸಬೇಕು

## ರಾಜದಂಡನೆಯ ಫಲ

190. ರಾಜನಿರ್ಧೂತದಂಡಾಸ್ತು ಕೃತ್ವಾ ಪಾಪಾನಿ ಮಾನವಾಃ ।
ನಿರ್ಮಲಾಃ ಸ್ವರ್ಗಮಾಯಾಂತಿ ಸಂತಃ ಸುಕೃತಿನೋ ಯಥಾ ॥ -VIII 318

ಪಾಪ ಮಾಡಿದ ಮನುಷ್ಯರು ರಾಜನಿಂದ ಶಿಕ್ಷಿಸಲ್ಪಟ್ಟಮೇಲೆ, ಪರಿಶುದ್ಧರೆನ್ನಿಸಿದವರಾಗಿ ಪುಣ್ಯಮಾಡಿದ ಸತ್ಪುರುಷರಂತೆ ಸ್ವರ್ಗವನ್ನೇ ಪಡೆಯುವರು.

---

1 ಅಪೂಜ್ಯೋ ಪೂಜ್ಯತೇ ಯತ್ರ ಪೂಜ್ಯೋ ಯತ್ರ ನ ಪೂಜ್ಯತೇ ।
ತ್ರೀಣಿ ತತ್ರ ಭವಿಷ್ಯಂತಿ ದುರ್ಭಿಕ್ಷಂ ಮರಣಂ ಭಯಮ್ ॥

-ಮಹಾಭಾರತ

2 ಉತ್ತಮೇ ವಚಸಾ ಶಿಕ್ಷಾ ಮಧ್ಯಮೇ ಅರ್ಥಾಪಹಾರಣಮ್ ।
ಅಧಮೇ ದೇಹದಂಡಶ್ಚ.

- (ಮ ಭಾ ಶಾ ನಿ. (21/344))

## ತಪ್ಪುಮಾಡಿದ ಎಲ್ಲರನ್ನೂ ರಾಜನು ಶಿಕ್ಷಿಸಲೇಬೇಕು

191 ಪಿತಾಽಽಚಾರ್ಯಃ ಸುಹೃನ್ಮಾತಾ ಭಾರ್ಯಾ ಪುತ್ರಃ ಪುರೋಹಿತಃ ।

ನಾದಂಡ್ಯೋ ನಾಮ ರಾಜ್ಞೋಽಸ್ತಿ ಯಃ ಸ್ವಧರ್ಮೇ ನ ತಿಷ್ಠತಿ ॥ -VIII 335

ತಂದೆ, ತಾಯಿ, ಆಚಾರ್ಯ,. ಸ್ನೇಹಿತ, ಪತ್ನಿ, ಮಗ, ಪುರೋಹಿತ ಮೊದಲಾಗಿ ಯಾರೇ ತಮ್ಮ ಧರ್ಮವನ್ನು ತಪ್ಪಿದರೂ ರಾಜನ ಪಾಲಿಗೆ ಅವರು ಶಿಕ್ಷಾರ್ಹರೇ ಸರಿ

## ದಂಡವು ಅನಿವಾರ್ಯ

192 ನ ಹಿ ದಂಡಾದೃತೇ ಶಕ್ಯಃ ಕರ್ತುಂ ಪಾಪವಿನಿಗ್ರಹಃ ।

ಸ್ತೇನಾನಾಂ ಪಾಪಬುದ್ಧೀನಾಂ ನಿಭೃತಂ ಚರತಾಂ ಕ್ಷಿತೌ ॥ -IX 263

ದಂಡವಿಲ್ಲದೇ ಪಾಪಿಷ್ಠರನ್ನು ನಿಗ್ರಹಿಸುವುದು ಆಗದ ಮಾತು. ಆದುದರಿಂದ ಕಳ್ಳರನ್ನು ಮತ್ತು ಜಗತ್ತಿನಲ್ಲಿ ಕೊಬ್ಬಿ ನಡೆಯುವ ಪಾಪಿಷ್ಠರನ್ನು ರಾಜನು ಅವಶ್ಯವಾಗಿ ಶಿಕ್ಷಿಸಲೇಬೇಕು.

## ದಂಡ ವಿಧಿಸುವ ಅರ್ಹತೆ

193 ಶುಚಿನಾ ಸತ್ಯಸಂಧೇನ ಯಥಾಶಾಸ್ತ್ರಾನುಸಾರಿಣಾ ।

ಪ್ರಣೇತುಂ ಶಕ್ಯತೇ ದಂಡಃ ಸುಸಹಾಯೇನ ಧೀಮತಾ ॥ -VII 31

ಪರಿಶುದ್ಧನೂ, ಸತ್ಯಸಂಧನೂ, ಶಾಸ್ತ್ರೋಕ್ತ ರೀತಿಯಲ್ಲಿ ನಡೆಯುವವನೂ, ಒಳ್ಳೆಯ ಸಹಾಯವುಳ್ಳವನೂ, ಬುದ್ಧಿವಂತನೂ ಆದ ವ್ಯಕ್ತಿಯಿಂದ ಮಾತ್ರವೇ ದಂಡವನ್ನು ಸರಿಯಾಗಿ ಪ್ರಯೋಗಿಸಲು ಸಾಧ್ಯ.

## ರಾಜನ ಅವಶ್ಯಕತೆ

194 ಸ್ವೇ ಸ್ವೇ ಧರ್ಮೇ ನಿವಿಷ್ಟಾನಾಂ ಸರ್ವೇಷಾಮಾನುಪೂರ್ವಶಃ ।

ವರ್ಣಾನಾಮಾಶ್ರಮಾಣಾಂ ಚ ರಾಜಾ ಸೃಷ್ಟೋಽಭಿರಕ್ಷಿತಾ ॥ -VII 35

ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾದ ಎಲ್ಲಾ ವರ್ಣ ಹಾಗೂ ಆಶ್ರಮಗಳಲ್ಲಿನ ಜನರನ್ನು ರಕ್ಷಿಸಲೆಂದೇ ರಾಜನು ಸೃಷ್ಟಿಸಲ್ಪಟ್ಟಿದ್ದಾನೆ

## ರಾಜನ ಪ್ರಮುಖ ಅರ್ಹತೆ

195. ಇಂದ್ರಿಯಾಣಾಂ ಜಯೇ ಯೋಗಂ ಸಮಾತಿಷ್ಠೇದ್ದಿವಾನಿಶಮ್ ।
ಜಿತೇಂದ್ರಿಯೋ ಹಿ ಶಕ್ನೋತಿ ವಶೇ ಸ್ಥಾಪಯಿತುಂ ಪ್ರಜಾಃ ॥ -VII 44

ರಾಜನಾದವನು ಇಂದ್ರಿಯಗಳನ್ನು ಜಯಿಸುವ ಕಾರ್ಯದಲ್ಲಿ ಹಗಲೂ ಇರುಳೂ ಯತ್ನಿಸುತ್ತಿರಬೇಕು ಜಿತೇಂದ್ರಿಯನಾದವನು ಮಾತ್ರವೇ ಪ್ರಜೆಗಳನ್ನು ತನ್ನ ವಶದಲ್ಲಿರಿಸಿಕೊಳ್ಳಲು ಶಕ್ತನಾಗುತ್ತಾನೆ.

## ಯುದ್ಧಕ್ಕಾಗಿ ಹಾತೊರೆಯುವುದು ಬೇಡ

196. [1]ಅನಿತ್ಯೋ ವಿಜಯೋ ಯಸ್ಮಾದ್ದೃಶ್ಯತೇ ಯುಧ್ಯಮಾನಯೋಃ ।
ಪರಾಜಯಶ್ಚ ಸಂಗ್ರಾಮೇ ತಸ್ಮಾದ್ಯುದ್ಧಂ ವಿವರ್ಜಯೇತ್ ॥ -VII 199

ಯುದ್ಧದಲ್ಲಿ ತೊಡಗುವ ಉಭಯ ಪಕ್ಷಗಳಿಗೂ ಜಯಾಪಜಯಗಳು ತುಂಬಾ ಅನಿಶ್ಚಿತ. ಆದ್ದರಿಂದ ಅನಿವಾರ್ಯವಲ್ಲದ ಹೊರತು ಎಂದೂ ಯುದ್ಧವನ್ನು ತಾನಾಗಿಯೇ ಆಯ್ದುಕೊಳ್ಳಕೂಡದು.

## ರಾಜನು ಧರ್ಮಯುದ್ಧಕ್ಕೆ ಎಂದೂ ಹಿಂಜರಿಯಕೂಡದು

197 ಸಮೋತ್ತಮಾಧಮ್ಯೆ ರಾಜಾ ತ್ವಾಹೂತಃ ಪಾಲಯನ್ ಪ್ರಜಾಃ ।
[2]ನ ನಿವರ್ತೇತ ಸಂಗ್ರಾಮಾತ್ ಕ್ಷಾತ್ರಂ ಧರ್ಮಮನುಸ್ಮರನ್ ॥ -VII 87

---

[1] ನ ಚೈತದ್ವಿದ್ಮಃ ಕತರನ್ನೋ ಗರೀಯೋ ।
ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ॥
-ಭಗವದ್ಗೀತಾ (2/6)

ಯುದ್ಧಸಿದ್ಧಿರ್ಹಿ ಚಂಚಲಾ । -ವಾಲ್ಮೀಕಿರಾಮಾಯಣ (5/46/17)

[2] ಯುದ್ಧೇ ಚಾಪ್ಯಪಲಾಯನಮ್ । -( ಭಗವದ್ಗೀತಾ 18/43)

ಯುದ್ಧಕ್ಕಾಗಿ ಸಮ, ಉತ್ತಮ ಹಾಗೂ ಅಧಮರಾದ ಶತ್ರುಗಳಿಂದ ಆಹ್ವಾನಿಸಲ್ಪಟ್ಟ ರಾಜನು ಅಂತಹ ಯುದ್ಧದಿಂದ ಹಿಮ್ಮೆಟ್ಟಕೂಡದು. ಪ್ರಜೆಗಳ ಹಿತರಕ್ಷಣೆಯ ದೃಷ್ಟಿಯಿಂದ ಅಂತಹ ಯುದ್ಧವು ಕ್ಷತ್ರಿಯನ ಪಾಲಿನ ಹಿರಿಯ ಕರ್ತವ್ಯವೆಂದು ತಿಳಿದು ಉತ್ಸಾಹದಿಂದ ಹೋರಾಡಬೇಕು.

## ಧರ್ಮಯುದ್ಧವು ಸ್ವರ್ಗಪ್ರಾಪಕ[1]

198 ಆಹವೇಷು ಮಿಥೋಽನ್ಯೋನ್ಯಂ ಜಿಘಾಂಸಂತೋ ಮಹೀಕ್ಷಿತಃ ।
ಯುದ್ಧ್ಯಮಾನಾಃ ಪರಂ ಶಕ್ತ್ಯಾ ಸ್ವರ್ಗಂ ಯಾಂತ್ಯಪರಾಙ್ಮುಖಾಃ ॥ -VII 89

ಪರಸ್ಪರರನ್ನು ಗೆಲ್ಲಬೇಕೆಂಬ ಉತ್ಸಾಹದಿಂದ ತಮ್ಮ ಶಕ್ತ್ಯನುಸಾರ ಎಂದೂ ಹಿಮ್ಮೆಟ್ಟದೆ ಯುದ್ಧಮಾಡುವ ರಾಜರು ಸೋಲಲಿ ಅಥವಾ ಗೆಲ್ಲಲಿ, ಸ್ವರ್ಗವು ಅವರಿಗೆ ನಿಶ್ಚಿತ.

## ದುಷ್ಟ ಅಧಿಕಾರಿಗಳಿಂದ ಪ್ರಜೆಗಳನ್ನು ರಕ್ಷಿಸಬೇಕು

199 [2]ರಾಜ್ಞೋ ಹಿ ರಕ್ಷಾಧಿಕೃತಾಃ ಪರಸ್ವಾದಾಯಿನಃ ಶಠಾಃ ।
ಭೃತ್ಯಾ ಭವಂತಿ ಪ್ರಾಯೇಣ ತೇಭ್ಯೋ ರಕ್ಷೇದಿಮಾಃ ಪ್ರಜಾಃ ॥ -VII 123

ಪ್ರಜಾರಕ್ಷಣೆಯ ದೃಷ್ಟಿಯಿಂದ ರಾಜನಿಂದ ವಿವಿಧ ಅಧಿಕಾರಗಳಲ್ಲಿ ನಿಯಮಿಸಲ್ಪಟ್ಟ ಅಧಿಕಾರಿಗಳು ಸಾಮಾನ್ಯವಾಗಿ ವಂಚಕರೂ ಜನಗಳ ಸ್ವತ್ತನ್ನು ಕಿತ್ತಿಕೊಳ್ಳುವವರೂ

---

1 ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।
-ಭಗವದ್ಗೀತಾ (2/37)

ಯಃ ಪದಾತಿಂ ಹಂತಿ ಸ ಭವತಿ ಚಾತುರ್ಮಾಸ್ಯಯಾಜೀ, ಯಃ ಸಾದಿನಂ ಸೋಽಗ್ನಿಷ್ಟೋಮಸ್ಯ, ಯೋ ಹಂತಿ ಗಜರಥೌ ಸೋಽಶ್ವಮೇಧರಾಜಸೂಯಾಭ್ಯಾಮ್"
-ಶ್ರುತಿಃ (ಭಾಗವತತಾತ್ಪರ್ಯ 1/9/5)

2 ಭ್ರಷ್ಟಾಚಾರಿಗಳಾದ ಅಧಿಕಾರಿಗಳಿಗೆ ವೈತರಣೀ ಎಂಬ ನರಕವಾಗುತ್ತದೆ ಎಂದು ಭಾಗವತ ಪುರಾಣದಲ್ಲಿ ಹೇಳಿದೆ.

ಆಗುತ್ತಾರೆ. ಅಂತಹ ದುಷ್ಟ ಅಧಿಕಾರಗಳ ಕೈಯಿಂದ ರಾಜನು ತನ್ನ ಪ್ರಜೆಗಳನ್ನು ರಕ್ಷಿಸಬೇಕು.

200 *ಯೇ ಕಾರ್ಯಿಕೇಭ್ಯೋಽರ್ಥಮೇವ ಗೃಹ್ಣೀಯುಃ ಪಾಪಚೇತಸಃ ।
ತೇಷಾಂ ಸರ್ವಸ್ವಮಾದಾಯ ರಾಜಾ ಕುರ್ಯಾತ್ಪ್ರವಾಸನಮ್ ॥ -VII 124

ಕಾರ್ಯಾರ್ಥವಾಗಿ ತಮ್ಮಲ್ಲಿಗೆ ಬರುವ ಜನಗಳಿಂದ ಹಣವನ್ನು ಕೀಳುವ (ಲಂಚಕೋರ) ಪಾಪಿಷ್ಟ ಅಧಿಕಾರಿಗಳ ಎಲ್ಲ ಸಂಪತ್ತನ್ನೂ ರಾಜನು ಕಿತ್ತುಕೊಂಡು ಅವರನ್ನು ತನ್ನ ರಾಜ್ಯದಿಂದ ಹೊರಕ್ಕೆ ಹಾಕಬೇಕು.

## ರಾಜನು ಧನದ ವಿಷಯದಲ್ಲಿ ವಹಿಸಬೇಕಾದ ಎಚ್ಚರಿಕೆ

201. ಅನಾದೇಯಂ ನಾದದೀತ ಪರಿಕ್ಷೀಣೋಽಪಿ ಪಾರ್ಥಿವಃ ।
ನ ಚಾದೇಯಂ ಸಮೃದ್ಧೋಽಪಿ ಸೂಕ್ಷ್ಮಮಪ್ಯರ್ಥಮುತ್ಸೃಜೇತ್ ॥ -VIII 170

ರಾಜನು ಎಂತಹ ಕಷ್ಟಕಾಲದಲ್ಲೂ ಸಹ ತನ್ನ ಪಾಲಿಗೆ ಸಲ್ಲದ್ದಕ್ಕೆ ಕೈ ಹಾಕಕೂಡದು. ಎಷ್ಟೇ ಸಂಪತ್ತನ್ನು ಹೊಂದಿದ್ದರೂ ಕೂಡ ತನಗೆ ಸಲ್ಲಬೇಕಾದ ಅತ್ಯಲ್ಪ ಹಣವನ್ನೂ ತೆಗೆದುಕೊಳ್ಳದೆ ಬಿಡಕೂಡದು.

202. ಅನಾದೇಯಸ್ಯ ಚಾದಾನಾದಾದೇಯಸ್ಯ ಚ ವರ್ಜನಾತ್ ।
ದೌರ್ಬಲ್ಯಂ ಖ್ಯಾಪ್ಯತೇ ರಾಜ್ಞಃ ಸ ಪ್ರೇತ್ಯೇಹ ಚ ನಶ್ಯತಿ ॥ -VIII 171

---

* ಯೇ ತ್ವಿಹ ವೈ ರಾಜನ್ಯಾ ರಾಜಪುರುಷಾ ವಾ ಪಾಖಂಡಾ ಧರ್ಮಸೇತೂನ್ ಭಿಂದಂತಿ ತೇ ಸಂಪರೇತ್ಯ ವೈತರಣ್ಯಾಂ ನಿಪತಂತಿ ಭಿನ್ನಮರ್ಯಾದಾಸ್ತಸ್ಯಾಂ ನಿರಯಪರಿಖಾಭೂತಾಯಾಂ ನದ್ಯಾಂ ಯಾದೋಗಣೈರಿತಸ್ತತೋ ಭಕ್ಷ್ಯಮಾಣಾ ಆತ್ಮನಾ ನ ವಿಯುಜ್ಯಮಾನಾಶ್ಚಾಸುಭಿರುಹ್ಯಮಾನಾಃ ಸ್ವಾಘೇನ ಕರ್ಮಪಾಕಮನುಸ್ಮರಂತೋ ವಿಣ್ಮೂತ್ರಪೂಯಶೋಣಿತಕೇಶನಖಾಸ್ಥಿ ಮೇದೋಮಾಂಸವಸಾವಾಹಿನ್ಯಾಮುಪತಪ್ಯಂತೇ ।

- ಭಾಗವತ (V/26/22)

ಅಯೋಗ್ಯವಾದದ್ದನ್ನು ಸ್ವೀಕರಿಸುವುದರಿಂದಲೂ, ಯೋಗ್ಯವಾದದ್ದನ್ನು ತಿರಸ್ಕರಿಸುವುದರಿಂದಲೂ ರಾಜನ ದೌರ್ಬಲ್ಯವು ವ್ಯಕ್ತವಾಗುತ್ತದೆ. ಮರಣಾನಂತರವೂ ಸಹ ಅವನಿಗೆ ಉತ್ತಮ ಲೋಕಗಳು ದೊರೆಯುವುದಿಲ್ಲ

## ರಾಜನು ದುರ್ವ್ಯಸನಗಳಿಂದ ದೂರವಿರಬೇಕು

203 ದಶ ಕಾಮಸಮುತ್ಥಾನಿ ತಥಾऽಷ್ಟೌ ಕ್ರೋಧಜಾನಿ ಚ ।
ವ್ಯಸನಾನಿ ದುರಂತಾನಿ ಪ್ರಯತ್ನೇನ ವಿವರ್ಜಯೇತ್ ॥ -VII 45

ಕಾಮಜನ್ಯವಾದ ಹತ್ತು, ಕ್ರೋಧಜನ್ಯವಾದ ಎಂಟು ಹೀಗೆ ಒಟ್ಟು ಹದಿನೆಂಟು ದುರಂತಕಾರಕವಾದ ವ್ಯಸನ(ಹವ್ಯಾಸ)ಗಳನ್ನು ರಾಜನು ಪ್ರಯತ್ನ ಪೂರ್ವಕವಾಗಿ ತ್ಯಜಿಸಬೇಕು.

## ದುರ್ವ್ಯಸನಗಳಿಂದ ಆಗುವ ಅನರ್ಥ

204 ಕಾಮಜೇಷು ಪ್ರಸಕ್ತೋ ಹಿ ವ್ಯಸನೇಷು ಮಹೀಪತಿಃ ।
ವಿಯುಜ್ಯತೇऽರ್ಥಧರ್ಮಾಭ್ಯಾಂ ಕ್ರೋಧಜೇಷ್ವಾತ್ಮನೈವ ಹಿ ॥ -VII 46

ಕಾಮಮೂಲವಾದ ವ್ಯಸನಗಳಲ್ಲಿ ಪ್ರಸಕ್ತನಾದ ರಾಜನು ಅರ್ಥ ಮತ್ತು ಧರ್ಮಗಳನ್ನು ಕಳೆದುಕೊಳ್ಳುತ್ತಾನೆ ; ಕ್ರೋಧಮೂಲವ್ಯಸನಗಳಿಂದಾಗಿ ತನ್ನನ್ನೇ ನಾಶ ಮಾಡಿಕೊಳ್ಳುತ್ತಾನೆ.

## ಕಾಮಮೂಲ ವ್ಯಸನಗಳು

205 ಮೃಗಯಾऽಕ್ಷೋ ದಿವಾಸ್ವಪ್ನಃ ಪರೀವಾದಃ ಸ್ತ್ರಿಯೋ ಮದಃ ।
ತೌರ್ಯತ್ರಿಕಂ ವೃಥಾಟ್ಯಾ ಚ ಕಾಮಜೋ ದಶಕೋ ಗಣಃ ॥ -VII 47

ಬೇಟೆಯಾಡುವುದು, ದ್ಯೂತ, ಹಗಲುನಿದ್ರೆ, ಪರನಿಂದೆ, ಸ್ತ್ರೀಯರು, ಮದ, ಸಂಗೀತ (ನೃತ್ಯ, ಗೀತ, ವಾದ್ಯ) ಮತ್ತು ವ್ಯರ್ಥ ಅಲೆದಾಟ, ಈ ಹತ್ತು ಕಾಮಮೂಲವಾದ ದುರ್ವ್ಯಸನಗಳು.

## ಕ್ರೋಧ ಮೂಲ ವ್ಯಸನಗಳು

206 ಪೈಶುನ್ಯಂ ಸಾಹಸೋ ದ್ರೋಹ ಈರ್ಷ್ಯಾऽಸೂಯಾऽರ್ಥದೂಷಣಂ ।
ವಾಗ್ದಂಡಜಂ ಚ ಪಾರುಷ್ಯಂ ಕ್ರೋಧಜೋऽಪಿ ಗಣೋऽಷ್ಟಕಃ ॥ -VII 48

ಪಿಶುನತೆ (ಚಾಡಿಕೋರತನ), ವ್ಯರ್ಥಸಾಹಸ, ದ್ರೋಹ, ಈರ್ಷ್ಯೆ, ಅಸೂಯೆ, ಅರ್ಥದೂಷಣ, ವಾಗ್ದಂಡ, ಕ್ರೂರತನ ಈ ಎಂಟು ಕ್ರೋಧಮೂಲವ್ಯಸನಗಳು.

## ಲೋಭವೇ ಈ ಎರಡು ವಿಧ ವ್ಯಸನಗಳಿಗೂ ಮೂಲ

207. ದ್ವಯೋರಪ್ಯೇತಯೋರ್ಮೂಲಂ ಯಂ ಸರ್ವೇ ಕವಯೋ ವಿದುಃ ।
ತಂ ಯತ್ನೇನ ಜಯೇಲ್ಲೋಭಂ ತಜ್ಜಾವೇತಾವುಭೌ ಗಣೌ ॥ VII 49

ಈ ಎರಡು ವಿಧ ವ್ಯಸನಗಳಿಗೂ ಲೋಭವೇ ಮೂಲಕಾರಣವೆಂದು ಜ್ಞಾನಿಗಳು ಹೇಳುತ್ತಾರೆ; ಆದ್ದರಿಂದ ಲೋಭವನ್ನೂ ಸಹ ಪ್ರಯತ್ನಪೂರ್ವಕ ಜಯಿಸಲೇಬೇಕು.

## ರಾಜ ಧರ್ಮಗಳು

208. ಅಲಬ್ಧಮಿಚ್ಛೇದ್ದಂಡೇನ ಲಬ್ಧಂ ರಕ್ಷೇದವೇಕ್ಷಯಾ ।
ರಕ್ಷಿತಂ ವರ್ಧಯೇದ್ವೃದ್ಧ್ಯಾ ವೃದ್ಧಂ ದಾನೇನ ನಿಕ್ಷಿಪೇತ್ ॥ -VII 101

ದೊರೆಯದ್ದನ್ನು ದಂಡೋಪಾಯದಿಂದ ಪಡೆಯಲು ಯತ್ನಿಸಬೇಕು. ಹಾಗೆ ದೊರೆತದ್ದನ್ನು ಎಚ್ಚರಿಕೆಯಿಂದ ಕಾಪಾಡಬೇಕು. ರಕ್ಷಿಸಿದ್ದನ್ನು ಬಹು ಪಟ್ಟು ಹೆಚ್ಚಿಸಬೇಕು ಹೆಚ್ಚಿಸಿದ್ದನ್ನು ದಾನ ಮಾಡುವ ಮೂಲಕ ಉಳಿಸಿಕೊಳ್ಳಬೇಕು.

209. ಅಮಾಯಯೈವ ವರ್ತೇತ ನ ಕಥಂಚನ ಮಾಯಯಾ ।
ಬುಧ್ಯೇತಾರಿಪ್ರಯುಕ್ತಾಂ ಚ ಮಾಯಾಂ ನಿತ್ಯಂ ಸ್ವಸಂವೃತಃ ॥ -VII 104

ಯಾವಾಗಲೂ ಋಜು ಮಾರ್ಗದಲ್ಲೇ ನಡೆಯಬೇಕು ಎಂದೂ ವಂಚನೆಗೆ ಕೈ ಹಾಕಬಾರದು ಆದರೆ ಶತ್ರುಗಳು ಪ್ರಯೋಗಿಸುವ ಕಪಟವನ್ನು ಮಾತ್ರ ಬಹಳ ಎಚ್ಚರಿಕೆಯಿಂದ ಅವರಿಗೆ ತಿಳಿಯದಂತೆಯೇ ರಹಸ್ಯವಾಗಿ ಗಮನಿಸುತ್ತಿರಬೇಕು

210 ನಾಸ್ಯ ಛಿದ್ರಂ ಪರೋ ವಿದ್ಯಾದ್ವಿದ್ಯಾತ್ ಛಿದ್ರಂ ಪರಸ್ಯ ತು ।
ಗೂಹೇತ್ಕೂರ್ಮ ಇವಾಂಗಾನಿ ರಕ್ಷೇದ್ವಿವರಮಾತ್ಮನಃ ॥ -VII 105

ತನ್ನಲ್ಲಿರುವ ದೋಷವನ್ನು ಶತ್ರುವು ತಿಳಿಯದಂತೆ ಎಚ್ಚರವಹಿಸಬೇಕು. ತಾನು ಮಾತ್ರ ಶತ್ರುವಿನ ದೋಷವನ್ನು ಅರಿಯುತ್ತಿರಬೇಕು ಕೂರ್ಮವು ತನ್ನ ಅವಯವಗಳನ್ನು ಕಾಪಾಡಿಕೊಳ್ಳುವಂತೆ ತನ್ನನ್ನು ತಾನು ಸದಾ ರಕ್ಷಿಸಿಕೊಳ್ಳಬೇಕು.

211 ಬಕವಚ್ಚಿಂತಯೇದರ್ಥಾನ್ ಸಿಂಹವಚ್ಚ ಪರಾಕ್ರಮೇತ್ ।
ವೃಕವಚ್ಚಾವಲುಂಪೇತ ಶಶವಚ್ಚ ವಿನಿಷ್ಪತೇತ್ ॥ -VII 106

ಬಕಪಕ್ಷಿಯಂತೆ ತಾನು ಸಾಧಿಸಬೇಕಾದ ವಿಷಯಗಳನ್ನು ಕುರಿತು ಚಿಂತಿಸುತ್ತಿರಬೇಕು. ಶತ್ರುಗಳ ಮೇಲೆ ಸಿಂಹದಂತೆ ಆಕ್ರಮಣ ಮಾಡಬೇಕು. ತೋಳದಂತೆ ದ್ರವ್ಯವನ್ನು ಅಪಹರಿಸಬೇಕು. ಪ್ರಸಂಗ ಬಂದಾಗ ಮೊಲದಂತೆ ಜಾರಿ ತಪ್ಪಿಸಿಕೊಳ್ಳಬೇಕು.

## ಪ್ರಜಾಪೀಡನೆಯು ಹಾನಿಕರ

212 ಮೋಹಾದ್ರಾಜಾ ಸ್ವರಾಷ್ಟ್ರಂ ಯಃ ಕರ್ಷಯತ್ಯನವೇಕ್ಷಯಾ ।
ಸೋಽಚಿರಾದ್ಭ್ರಶ್ಯತೇ ರಾಜ್ಯಾಜ್ಜೀವಿತಾಚ್ಚ ಸಬಾಂಧವಃ ॥ -VII 111

ಮೋಹಪರವಶನಾಗಿ ತನ್ನ ರಾಷ್ಟ್ರವನ್ನು ಪೀಡಿಸುವ ರಾಜನು, ಅತಿಶೀಘ್ರವಾಗಿ ತನ್ನ ರಾಜ್ಯವನ್ನು ಕಳೆದುಕೊಂಡು ಬಂಧು ಸಮೇತನಾಗಿ ನಾಶವನ್ನು ಹೊಂದುವನು.

213 ಶರೀರಕರ್ಷಣಾತ್ ಪ್ರಾಣಾಃ ಕ್ಷೀಯಂತೇ ಪ್ರಾಣಿನಾಂ ಯಥಾ ।
ತಥಾ ರಾಜ್ಞಾಮಪಿ ಪ್ರಾಣಾಃ ಕ್ಷೀಯಂತೇ ರಾಷ್ಟ್ರಕರ್ಷಣಾತ್ ॥ -VII 112

ಶರೀರ ಪೀಡನೆಯಿಂದ ಪ್ರಾಣಿಗಳ ಪ್ರಾಣಗಳು ಹೊರಟು ಹೋಗುವಂತೆ ರಾಷ್ಟ್ರಪೀಡನೆಯಿಂದ ರಾಜನ ಪ್ರಾಣಗಳು ನಷ್ಟವಾಗುತ್ತವೆ

## ಪ್ರಜಾಪಾಲನೆಯೇ ರಾಜನ ಮುಖ್ಯ ಕರ್ತವ್ಯ

214. *ಕ್ಷತ್ರಿಯಸ್ಯ ಪರೋ ಧರ್ಮಃ ಪ್ರಜಾನಾಮೇವ ಪಾಲನಂ ।
ನಿರ್ದಿಷ್ಟಫಲಭೋಕ್ತಾ ಹಿ ರಾಜಾ ಧರ್ಮೇಣ ಯುಜ್ಯತೇ ॥ -VII 144

ಪ್ರಜಾಪಾಲನೆಯೇ ಕ್ಷತ್ರಿಯನ ಪಾಲಿನ ಹಿರಿಯ ಧರ್ಮ; ನ್ಯಾಯಕ್ಕೆ ಅನುಗುಣವಾದ ರೀತಿಯಲ್ಲಿ ತೆರಿಗೆಯನ್ನು ಪಡೆಯುವ ರಾಜನಿಗೆ ಧರ್ಮಹಾನಿಯ ಭಯವು ಇರುವುದಿಲ್ಲ

## ಧರ್ಮವಿರುದ್ಧವಾದ ಆಚರಣೆ ನಾಶಕರ

215. ಯಸ್ತ್ವಧರ್ಮೇಣ ಕಾರ್ಯಾಣಿ ಮೋಹಾತ್ಕುರ್ಯಾನ್ನರಾಧಿಪಃ ।
ಅಚಿರಾತ್ತಂ ದುರಾತ್ಮಾನಂ ವಶೇ ಕುರ್ವಂತಿ ಶತ್ರವಃ ॥ -VIII 174

ಮೋಹದಿಂದ, ಅಧರ್ಮಕ್ಕೆಳಸುವ ದುಷ್ಟನಾದ ರಾಜನನ್ನು ಶತ್ರುಗಳು ಬಹುಬೇಗನೆ ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಾರೆ.

## ಉತ್ತಮರಾಜನು ಪ್ರಜೆಗಳ ಆದರಕ್ಕೆ ಪಾತ್ರನಾಗುವನು

216 ಕಾಮಕ್ರೋಧೌ ತು ಸಂಯಮ್ಯ ಯೋಽರ್ಥಾನ್ ಧರ್ಮೇಣ ಪಶ್ಯತಿ ।
ಪ್ರಜಾಸ್ತಮನುವರ್ತಂತೇ ಸಮುದ್ರಮಿವ ಸಿಂಧವಃ ॥ -VIII 175

ಕಾಮ ಕ್ರೋಧಗಳಿಗೆ ವಶನಾಗದೇ ಧರ್ಮಕ್ಕೆ ವಿಹಿತವಾದ ರೀತಿಯಲ್ಲಿ ಎಲ್ಲ ವಿಷಯಗಳನ್ನು ಕಾಣುವ ರಾಜನನ್ನು ಪ್ರಜೆಗಳು, ಸಾಗರವನ್ನು ನದಿಗಳು ಹೇಗೋ ಹಾಗೆ ಓಲೈಸುತ್ತಾರೆ.

## ಧರ್ಮಾಧರ್ಮಗಳ ಷಡ್ಭಾಗವು ರಾಜನಿಗೆ ಸೇರುತ್ತದೆ

217 ಸರ್ವತೋ ಧರ್ಮಷಡ್ಭಾಗೋ ರಾಜ್ಞೋ ಭವತಿ ರಕ್ಷತಃ ।
ಅಧರ್ಮಾದಪಿ ಷಡ್ಭಾಗೋ ಭವತ್ಯಸ್ಯ ಹ್ಯರಕ್ಷತಃ ॥ -VIII 304

---

* ನೈವ ಶತ್ರೂನನುತ್ಸಾದ್ಯ ನಾನಾದಾಯ ಮಹದ್ಯಶಃ ।
ನಾಕೃತ್ವಾ ವಾಸುದೇವಾಜ್ಞಾಂ ರಾಜ್ಞಾಂ ಮುಖ್ಯಾ ಗತಿರ್ಭವೇತ್ ॥
-ಮ ಭಾ.ತಾ.ನಿ (22/345)

ಪ್ರಜೆಗಳನ್ನು ಯೋಗ್ಯ ರೀತಿಯಲ್ಲಿ ಪಾಲಿಸುವ ರಾಜನಿಗೆ, ಆ ರಾಜ್ಯದ ಎಲ್ಲೆಡೆಗಳಲ್ಲಿ ನಡೆಯುವ ಧರ್ಮಕಾರ್ಯಗಳ ಆರನೆಯ ಒಂದು ಭಾಗವು ಸೇರುತ್ತದೆ, ಹಾಗೆಯೇ ಪ್ರಜೆಗಳನ್ನು ಪಾಲಿಸದ ರಾಜನಿಗೆ ಪ್ರಜೆಗಳೆಲ್ಲರ ಅಧರ್ಮದ ಆರನೆಯ ಒಂದು ಪಾಲು ಸಹ ಬಂದು ಸೇರುತ್ತದೆ.

218 ಯದಧೀತೇ ಯದ್ಯಜತೇ ಯದ್ದದಾತಿ ಯದರ್ಚತಿ ।
ತಸ್ಯ ಷಡ್ಭಾಗಭಾಗ್ರಾಜಾ ಸಮ್ಯಗ್ಭವತಿ ರಕ್ಷಣಾತ್[1] ॥ -VIII 305

ತನ್ನ ರಕ್ಷಣೆಯಲ್ಲಿ ನಡೆಯುವ ಅಧ್ಯಯನ, ಯಜ್ಞ, ದಾನ, ಅರ್ಚನೆ ಮೊದಲಾದ ಎಲ್ಲಾ ಸತ್ಕಾರ್ಯಗಳ ಆರನೆಯ ಒಂದು ಪಾಲು ಪುಣ್ಯಕ್ಕೆ ರಾಜನು ಭಾಗಿಯಾಗುತ್ತಾನೆ.

## ಧರ್ಮಿಷ್ಟ ರಾಜನಿಗೆ ದೊರೆಯುವ ಫಲ

219 ರಕ್ಷನ್ ಧರ್ಮೇಣ ಭೂತಾನಿ ರಾಜಾ ವಧ್ಯಾಂಶ್ಚ ಘಾತಯನ್ ।
ಯಜತೇಽಹರಹರ್ಯಜ್ಞೈಃ ಸಹಸ್ರಶತದಕ್ಷಿಣೈಃ ॥ -VIII 306

ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಲೂ, ವಧಾರ್ಹರನ್ನು ಕೊಲ್ಲಿಸುತ್ತಲೂ ಇರುವ ರಾಜನು ಪ್ರತಿದಿನವೂ ಸಹಸ್ರ ಶತ ದಕ್ಷಿಣೆಗಳಿಂದ ಕೂಡಿದ ಯಜ್ಞಗಳನ್ನು ಮಾಡುವ ಪುಣ್ಯವನ್ನು ಸಂಪಾದಿಸಿಕೊಳ್ಳುವನು.

220 ನಿಗ್ರಹೇಣ ಹಿ ಪಾಪಾನಾಂ ಸಾಧೂನಾಂ ಸಂಗ್ರಹೇಣ ಚ ।
ದ್ವಿಜಾತಯ ಇವೇಜ್ಯಾಭಿಃ ಪೂಯಂತೇ ಸತತಂ ನೃಪಾಃ ॥ -VIII 311

ಪಾಪಿಗಳನ್ನು ಶಿಕ್ಷಿಸುತ್ತಲೂ, ಸಜ್ಜನರನ್ನು ರಕ್ಷಿಸುತ್ತಲೂ ಇರುವ ರಾಜರು, ಬ್ರಾಹ್ಮಣರು ಯಜ್ಞಗಳಿಂದ ಹೇಗೋ ಹಾಗೆ ಪವಿತ್ರರಾಗುತ್ತಾರೆ.

## ರಾಜನೇ ಕಾಲಕ್ಕೆ ಕಾರಣ

221 ಕಲಿಃ ಪ್ರಸುಪ್ತೋ ಭವತಿ ಸ ಜಾಗ್ರದ್ದ್ವಾಪರಂ ಯುಗಮ್ ।
ಕರ್ಮಸ್ವಭ್ಯುದ್ಯತಸ್ತ್ರೇತಾ ವಿಚರಂಸ್ತು ಕೃತಂ ಯುಗಮ್ ॥ -IX 302

---

[1] ಯದುತ್ತಿಷ್ಠತಿ ವರ್ಣೇಭ್ಯೋ ನೃಪಾಣಾಂ ಕ್ಷಯಿ ತತ್ಫಲಮ್ ।
ತಪಃ ಷಡ್ಭಾಗಮಕ್ಷಯ್ಯಂ ದದತ್ಯಾರಣ್ಯಕಾ ಹಿ ನಃ ॥
-ಕಾಳಿದಾಸನ ಅಭಿಜ್ಞಾನ ಶಾಕುಂತಲ (ಅಂಕ 2, ಶ್ಲೋ. 13)

ರಾಜನು ಕರ್ತವ್ಯಭ್ರಷ್ಟನಾಗಿ ನಿದ್ರಿಸುತ್ತಿದ್ದರೆ ಅದೇ ಕಲಿಯುಗ; ಕರ್ತವ್ಯದ ಬಗ್ಗೆ ಎಚ್ಚರವಹಿಸಿದರೆ ಅದು ದ್ವಾಪರಯುಗ, ಕರ್ತವ್ಯ ನಿರ್ವಹಣೆಯಲ್ಲಿ ಕೈ ಹಾಕಿದರೆ ತ್ರೇತಾಯುಗವಿದ್ದಂತೆ, ಕರ್ತವ್ಯರತನಾಗಿ ಸಂಚರಿಸುತ್ತಿದ್ದರೆ ಅದೇ ಕೃತಯುಗ.*

## ದೂತ (ರಾಯಭಾರಿ) ಲಕ್ಷಣ

222 ಅನುರಕ್ತಃ ಶುಚಿರ್ದಕ್ಷಃ ಸ್ಮೃತಿಮಾನ್ ದೇಶಕಾಲವಿತ್ ।
ವಪುಷ್ಮಾನ್ ವೀತಭೀರ್ವಾಗ್ಮೀ ದೂತೋ ರಾಜ್ಞಃ ಪ್ರಶಸ್ಯತೇ ॥ VII 64

ಸ್ವಾಮಿಭಕ್ತಿಯನ್ನು ಹೊಂದಿರುವವನೂ, ಪರಿಶುದ್ಧನೂ, ನಿಪುಣನೂ, ಸ್ಮರಣಶೀಲನೂ, ದೇಶ ಹಾಗೂ ಕಾಲಗಳನ್ನು ಅರ್ಥಮಾಡಿಕೊಂಡು ನಡೆಯುವವನೂ ಸುದೃಢ ದೇಹವನ್ನು ಹೊಂದಿರುವವನೂ, ಭಯರಹಿತನೂ, ವಾಗ್ಮಿಯೂ ಆದ ದೂತ (ರಾಯಭಾರಿ)ನನ್ನು ರಾಜನು ಹೊಂದಿರಬೇಕು.

## ಸಭೆಯ ಲಕ್ಷಣ

223. ಯಸ್ಮಿನ್ ದೇಶೇ ನಿಷೀದಂತಿ ವಿಪ್ರಾ ವೇದವಿದಸ್ತ್ರಯಃ ।
ರಾಜ್ಞಶ್ಚಾಧಿಕೃತೋ ವಿದ್ವಾನ್ ಬ್ರಹ್ಮಣಸ್ತಾಂ ಸಭಾಂ ವಿದುಃ ॥ -VIII 23

ಮೂವರು ವೇದಜ್ಞರಾದ ವಿಪ್ರರು ಮತ್ತು ರಾಜನಿಂದ ನಿಯಮಿಸಲ್ಪಟ್ಟ ಒಬ್ಬ ವಿದ್ವಾಂಸ ಇವರು ಸೇರಿರುವ ಸಭೆಯನ್ನು ಬ್ರಹ್ಮನ ಸಭೆಯೆಂದೇ ಕರೆಯುವರು.

224. ಅವ್ರತಾನಾಮಮಂತ್ರಾಣಾಂ ಜಾತಿಮಾತ್ರೋಪಜೀವಿನಾಂ ।
ಸಹಸ್ರಶಃ ಸಮೇತಾನಾಂ ಪರಿಷತ್ತ್ವಂ ನ ವಿದ್ಯತೇ ॥ -XII 114

---

* ಕಾಲೋ ವಾ ಕಾರಣಂ ರಾಜ್ಞೋ ರಾಜಾ ವಾ ಕಾಲಕಾರಣಮ್ ।
ಇತಿ ತೇ ಸಂಶಯೋ ಮಾ ಭೂತ್ ರಾಜಾ ಕಾಲಸ್ಯ ಕಾರಣಮ್ ॥
-ಮಹಾಭಾರತ (12/70/6, 5/130/15) ಮತ್ತು ಮ. ಭಾ. ತಾನಿ (30/37)

ವ್ರತ ಹೀನರು, ಮಂತ್ರ ಹೀನರು, ಆಗಿ ಜಾತಿಯ ಹೆಸರಿನಿಂದ ಮಾತ್ರವೇ ಬದುಕುವ ಜನರು ಸಾವಿರ ಸಂಖ್ಯೆಯಲ್ಲಿ ನೆರೆದರೂ ಆ ಸ್ಥಳವು ಸಭೆ* ಎನ್ನಿಸಲಾರರು.

## ಧರ್ಮರಕ್ಷಣೆಯೇ ಸಭೆಯ ಮುಖ್ಯ ಕರ್ತವ್ಯ

225 ಧರ್ಮೋ ವಿದ್ಧಸ್ತ್ವಧರ್ಮೇಣ ಸಭಾಂ ಯತ್ರೋಪತಿಷ್ಠತೇ ।
ಶಲ್ಯಂ ಚಾಸ್ಯ ನ ಕೃಂತಂತಿ ವಿದ್ಧಾಸ್ತತ್ರ ಸಭಾಸದಃ ॥ VIII 12

ಯಾವ ಸಭೆಯಲ್ಲಿ ಅಧರ್ಮದ ಹೊಡೆತಕ್ಕೆ ಧರ್ಮವು ತುತ್ತಾಗುವುದೋ ಮತ್ತು ಅಂತಹ ಅಧರ್ಮವು ವಿರೋಧಿಸಲ್ಪಡುವುದಿಲ್ಲವೋ ಅಂತಹದು ಸಭೆಯೇ ಅಲ್ಲ, ಅಲ್ಲಿಯ ಸಭಾಸದರು ಹಾನಿಗೀಡಾಗುತ್ತಾರೆ.

226. ಯತ್ರ ಧರ್ಮೋ ಹ್ಯಧರ್ಮೇಣ ಸತ್ಯಂ ಯಚ್ಚಾನೃತೇನ ಚ ।
ಹನ್ಯತೇ ಪ್ರೇಕ್ಷಮಾಣಾನಾಂ ಹತಾಸ್ತತ್ರ ಸಭಾಸದಃ ॥ -VIII 14

ಧರ್ಮವು ಅಧರ್ಮದಿಂದಲೂ, ಸತ್ಯವು ಸುಳ್ಳಿನಿಂದಲೂ ಆಕ್ರಮಿಸಲ್ಪಡುವುದನ್ನು ಕಂಡೂ ಸುಮ್ಮನಿರುವ ಸಭೆಯು ಸಭಾಸದರ ನಾಶಕ್ಕೆ ಕಾರಣವಾಗುತ್ತದೆ.

## ಸಭೆಗೆ ಹೋಗುವವನ ಕರ್ತವ್ಯ

227 ಸಭಾ ವಾ ನ ಪ್ರವೇಷ್ಟವ್ಯಂ ವಕ್ತವ್ಯಾಂ ವಾ ಸಮಂಜಸಮ್ ।
ಅಬ್ರುವನ್ ವಿಬ್ರುವನ್ ವಾಽಪಿ ನರೋ ಭವತಿ ಕಿಲ್ಬಿಷೀ ॥ -VIII 233

---

* ನ ಸಾ ಸಭಾ ಯತ್ರ ನ ಸಂತಿ ವೃದ್ಧಾಃ
ನ ತೇ ವೃದ್ಧಾ ಯೇ ನ ವಂದತೀಹ ಧರ್ಮಮ್ ।
ನ ತದ್ಧರ್ಮಂ ಯತ್ಸತ್ಯೇನ ಹೀನಂ ॥
ನ ತತ್ಸತ್ಯಂ ಯಚ್ಛಲೇನಾಭ್ಯುಪೇತಮ್ ॥ -ಮಹಾಭಾರತ (2/67/53)

ಯೇ ಧರ್ಮಂ ನ ವದಂತೀಹ ನ ತೇ ವೃದ್ಧಾ ಇತೀರಿತಾಃ ।
ಅವೃದ್ಧಮಂಡಿತಾಂ ನೈವ ಸಭೇತ್ಯಾಹುರ್ಮನೀಷಿಣಃ ॥
-ಮ ಭಾ.ತಾ.ನಿ (21/333)

ಇಲ್ಲವೇ ಸಭೆಗೆ ಹೋಗಬಾರದು, ಹೋದ ಮೇಲೆ ಸರಿಯಾದದ್ದನ್ನೇ ಹೇಳಬೇಕು ಸರಿಯಾದದ್ದನ್ನು ಹೇಳದೇ ಸುಮ್ಮನೇ ಇದ್ದರಾಗಲೀ ಅಥವಾ ತಪ್ಪಾಗಿ ಹೇಳಿದರಾಗಲೀ ಆ ಮನುಷ್ಯನು ಪಾಪಭಾಗಿಯಾಗುತ್ತಾನೆ.

## ಪಾಪ ವಿಭಾಗ

228 ಪಾದೋ ಧರ್ಮಸ್ಯ ಕರ್ತಾರಂ ಪಾದಃ ಸಾಕ್ಷಿಣಮೃಚ್ಛತಿ ।
ಪಾದಃ ಸಭಾಸದಃ ಸರ್ವಾನ್ ಪಾದೋ ರಾಜಾನಮೃಚ್ಛತಿ ॥ -VIII 18

ಅಧರ್ಮದ ಒಂದು ಪಾಲು ಅದನ್ನು ಮಾಡಿದವನಿಗೂ, ಇನ್ನೊಂದು ಪಾಲು ಅದಕ್ಕೆ ಸಾಕ್ಷಿಯಾಗಿದ್ದವನಿಗೂ, ಮತ್ತೊಂದು ಪಾಲು ಸಭಿಕರಿಗೂ, ಉಳಿದ ಒಂದು ಪಾಲು ರಾಜನಿಗೂ ಸೇರುತ್ತದೆ.

## ದಂಡದಿಂದ ಪಾಪವಿಮುಕ್ತಿ

229. ರಾಜಾ ಭವತ್ಯನೇನಾಸ್ತು ಮುಚ್ಯಂತೇ ಚ ಸಭಾಸದಃ ।
ಏನೋ ಗಚ್ಛತಿ ಕರ್ತಾರಂ ನಿಂದಾರ್ಹೋ ಯತ್ರ ನಿಂದ್ಯತೇ ॥ -VIII 19

ಅಧರ್ಮವನ್ನು ಆಚರಿಸಿದವನನ್ನು ಶಿಕ್ಷಿಸುವುದರಿಂದ, ರಾಜನಿಗೂ ಪಾಪವಿಲ್ಲ, ಸಭಾಸದರೂ ಪಾಪಭಾಗಿಗಳಾಗುವುದಿಲ್ಲ. ಪಾಪವೆಲ್ಲ ಅದನ್ನು ಮಾಡಿದವನಿಗೆ ಮಾತ್ರವೇ ಸೇರುತ್ತದೆ.

## ಸಾಕ್ಷಿಯ ಮನಸ್ಸನ್ನು ತಿಳಿಯುವ ರೀತಿ

230 ಆಕಾರೈರಿಂಗಿತೈರ್ಗತ್ಯಾ ಚೇಷ್ಟಯಾ ಭಾಷಿತೇನ ಚ ।
ನೇತ್ರವಕ್ತ್ರವಿಕಾರೈಶ್ಚ ಗೃಹ್ಯತೇಽಂತರ್ಗತಂ ಮನಃ ॥ -VIII 26

ವ್ಯಕ್ತಿಯಲ್ಲಿ ಅಡಗಿರುವ ಮನೋಭಾವವನ್ನು ಅವನ ಆಕಾರದಿಂದಲೂ, ಇಂಗಿತಗಳಿಂದಲೂ, ಓಡಾಟದಿಂದಲೂ, ಚೇಷ್ಟೆಗಳಿಂದಲೂ ಆಡುವ ಮಾತಿನಿಂದಲೂ, ಕಣ್ಣು ಮತ್ತು ಮುಖಗಳಲ್ಲಿ ಕಾಣುವ ವಿಕಾರಗಳಿಂದಲೂ ತಿಳಿದುಕೊಳ್ಳಬಹುದು.

## ಸಾಕ್ಷಿಯು ಸತ್ಯವನ್ನೇ ಹೇಳಬೇಕು

231 ಸತ್ಯೇನ ಪೂಯತೇ ಸಾಕ್ಷೀ ಧರ್ಮಃ ಸತ್ಯೇನ ವರ್ಧತೇ ।
ತಸ್ಮಾತ್ ಸತ್ಯಂ ಹಿ ವಕ್ತವ್ಯಂ ಸರ್ವವರ್ಣೇಷು ಸಾಕ್ಷಿಭಿಃ[1] ॥ -VIII 83

ಸತ್ಯ ಹೇಳುವುದರಿಂದ ಸಾಕ್ಷಿಯು ಶುದ್ಧನಾಗುತ್ತಾನೆ. ಸತ್ಯದಿಂದ ಧರ್ಮ ವರ್ಧಿಸುತ್ತದೆ. ಆದ್ದರಿಂದ ಎಲ್ಲಾ ವರ್ಣದವರ ವಿಚಾರದಲ್ಲೂ ಸಾಕ್ಷಿಯು ಸತ್ಯವನ್ನೇ ಹೇಳಬೇಕು.

## ಸುಳ್ಳುಸಾಕ್ಷ್ಯವು ಆತ್ಮದ್ರೋಹವೇ ಸರಿ

232 ಆತ್ಮೈವ ಹ್ಯಾತ್ಮನಃ ಸಾಕ್ಷೀ ಗತಿರಾತ್ಮಾ ತಥಾಽತ್ಮನಃ ।
ಮಾಽವಮಂಸ್ಥಾಃ ಸ್ವಮಾತ್ಮಾನಂ ನೃಣಾಂ ಸಾಕ್ಷಿಣಮುತ್ತಮಮ್ ॥ -VIII 84

ತನ್ನ ಆತ್ಮಕ್ಕೆ ತಾನೇ ಸಾಕ್ಷಿ ತನಗೆ ತಾನೇ ಗತಿ, ಆದ್ದರಿಂದ ಸಾಕ್ಷಿಗಳಲ್ಲಿ ಶ್ರೇಷ್ಠವಾದ ತನ್ನ ಆತ್ಮವನ್ನೇ ತಾನು ವಂಚಿಸಿಕೊಳ್ಳುವುದು ಸಲ್ಲದು.

## ಕೆಲವೊಮ್ಮೆ ಸುಳ್ಳುಸಾಕ್ಷ್ಯವು ದೋಷಕರವಲ್ಲ

233.[2]ಕಾಮಿನೀಷು ವಿವಾಹೇಷು ಗವಾಂ ಭಕ್ಷ್ಯೇ ತಥೇಂಧನೇ ।
ಬ್ರಾಹ್ಮಣಾಭ್ಯುಪಪತ್ತೌ ಚ ಶಪಥೇ ನಾಸ್ತಿ ಪಾತಕಮ್ ॥ -VIII 112

---

1 ಸುಳ್ಳು ಸಾಕ್ಷ್ಯ ಹೇಳುವವರಿಗೆ ಲಭಿಸುವ ನರಕವನ್ನು, 'ಭಾಗವತ' ವರ್ಣಿಸಿದೆ :-
ಯಸ್ತ್ವಿಹವಾ ಅನೃತಂ ವದತಿ ಸಾಕ್ಷ್ಯೇ ದ್ರವ್ಯನಿವಿಮಯೇ ದಾನೇ ವಾ ಕಥಂಚಿತ್ಸ ವೈ ಪ್ರೇತ್ಯ ನರಕೇಽವೀಚಿಮತ್ಯಧಃಶಿರಾ ನಿರವಕಾಶೇ ಯೋಜನ ಶತೋಚ್ಛ್ರಾಯಾದ್ ಗಿರಿಮೂರ್ಧ್ನಃ ಸಂಪಾತ್ಯತೇ, ಯತ್ರ ಜಲಮಿವ ಸ್ಥಲ ಮಶ್ಮಪೃಷ್ಠಮವಭಾಸತೇ ತದವೀಚಿಮತ್ತಿಲಶೋ ವಿಶೀರ್ಯಮಾಣ ಶರೀರೋ ನ ಮ್ರಿಮಾಣಃ ಪುನರಾರೋಪಿತೋ ನಿಪತತಿ ॥

- ಭಾಗವತ (V/26/28)

2 ಸ್ತ್ರೀಷು ನರ್ಮವಿವಾಹೇ ಚ ವೃತ್ತ್ಯರ್ಥೇ ಪ್ರಾಣಸಂಕಟೇ ।
ಗೋಬ್ರಾಹ್ಮಣಾರ್ಥೇ ಹಿಂಸಾಯಾಂ ನಾನೃತಂ ಸ್ಯಾಜ್ಜುಗುಪ್ಸಿತಮ್ ॥

ಭಾಗವತ (8/19/43)

ಸ್ತ್ರೀಯರ ವಿಷಯದಲ್ಲಿಯೂ, ನಡೆಯುತ್ತಿರುವ ವಿವಾಹವನ್ನು ಮುಂದುವರೆಸುವ ದೃಷ್ಟಿಯಿಂದಲೂ, ಹಸುಗಳು ಆಹಾರ ತಿನ್ನಲು ಅನುಕೂಲ ಮಾಡಿಕೊಡುವ ದೃಷ್ಟಿಯಿಂದಲೂ, ಹೋಮ ಕಾರ್ಯಕ್ಕಾಗಿ ಕಟ್ಟಿಗೆಗಳು ಒಯ್ಯಲ್ಪಟ್ಟಿದ್ದಾಗಲೂ, ಸದ್ಬ್ರಾಹ್ಮಣನ ಆಪತ್ತನ್ನು ಪರಿಹರಿಸುವ ದೃಷ್ಟಿಯಿಂದಲೂ ಹೇಳಲ್ಪಡುವ ಸುಳ್ಳುಸಾಕ್ಷ್ಯವು ದೋಷವೆನಿಸುವುದಿಲ್ಲ[1]

## ಕೆಲವು ಕರಾರುಗಳು ಊರ್ಜಿತವೆನಿಸುವುದಿಲ್ಲ

234 ಮತ್ತೋನ್ಮತ್ತಾರ್ತಾಧ್ಯಧೀನೈರ್ಬಾಲೇನ ಸ್ಥವಿರೇಣ ವಾ ।
ಅಸಂಬದ್ಧ ಕೃತಶ್ಚೈವ ವ್ಯವಹಾರೋ ನ ಸಿದ್ಧ್ಯತಿ ॥ -viii 163

ಕುಡಿದವರು, ಹುಚ್ಚರು, ದುಃಖಿತರು, ಮತ್ತೊಬ್ಬರ ಅಧೀನರು, ಬಾಲಕರು, ಮುದುಕರು ಮತ್ತು ಅಸಂಬದ್ಧವಾಗಿ ವರ್ತಿಸುವವರು ಆದಂತಹ ಜನರೊಂದಿಗೆ ಮಾಡಿಕೊಂಡ ಒಪ್ಪಂದಗಳಿಗೆ ಧರ್ಮದ ಒಪ್ಪಿಗೆಯು ದೊರೆಯುವುದಿಲ್ಲ

235 ಸತ್ಯಾ ನ ಭಾಷಾ ಭವತಿ ಯದ್ಯಪಿ ಸ್ಯಾತ್ ಪ್ರತಿಷ್ಠಿತಾ ॥
ಬಹಿಶ್ಚೇದ್ಭಾಷ್ಯತೇ ಧರ್ಮಾನ್ನಿಯಮಾದ್ವ್ಯಾವಹಾರಿಕಾತ್ ॥ -viii 164

ಒಪ್ಪಂದ ಮಾಡಿಕೊಂಡದ್ದು ನಿಜವೇ ಆಗಿದ್ದರೂ, ಅದು ಧರ್ಮಕ್ಕೆ ಅನುಗುಣವಾಗಿರದಿದ್ದಲ್ಲಿ ಊರ್ಜಿತವೆನಿಸುವುದಿಲ್ಲ.

---

1 ನ ನರ್ಮಯುಕ್ತಂ ವಚನಂ ಹಿನಸ್ತಿ ನ ಸ್ತ್ರೀಷು ರಾಜನ್ ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ ॥
-ಮಹಾಭಾರತ (1/77/68, 12/159/28)

2 ಭೀತೇನ ದತ್ತಂ ದ್ಯೂತದತ್ತಂ ತಥೈವ
ದತ್ತಂ ಕಾಮಿನ್ಯೈ ಪುನರಾಹಾರ್ಯಮೇವ ॥
-ಮ ಭಾ.ತಾ ನಿ (22/108)

ಸ್ತ್ರೀಷು ದ್ಯೂತೇಷು ವಾ ದತ್ತಂ ಮದಾಂಧೇನ ನರೇಣ ವಾ ।
ನ ದತ್ತಮಾಹುರ್ವಿದ್ವಾಂಸಸ್ತಸ್ಯ ಬಂಧುಭಿರೇವ ವಾ ॥
ಆಹಾರ್ಯಂ ಪುನರಾಹುಶ್ಚ .. (ಮ ಭಾ.ತಾ.ನಿ. 21/380)

## ಇಂತಹವರಲ್ಲಿ ನಿಕ್ಷೇಪವನ್ನಿರಿಸಬೇಕು

236 ಕುಲಜೇ ವೃತ್ತಸಂಪನ್ನೇ ಧರ್ಮಜ್ಞೇ ಸತ್ಯವಾದಿನಿ ।
ಮಹಾಪಕ್ಷೇ ಧನಿನ್ಯಾರ್ಯೇ ನಿಕ್ಷೇಪಂ ನಿಕ್ಷಿಪೇದ್ಬುಧಃ ॥ -VIII 179

ಸತ್ಕುಲಪ್ರಸೂತನೂ, ಶೀಲವಂತನೂ, ಧರ್ಮಜ್ಞನೂ, ಸತ್ಯವಾದಿಯೂ, ಮಹಾಪಕ್ಷನೂ, ಧನವಂತನೂ, ಸಜ್ಜನನೂ ಆದ ವ್ಯಕ್ತಿಯಲ್ಲಿ ವಿವೇಕಿಯಾದವನು ನಿಕ್ಷೇಪವನ್ನಿರಿಸಬೇಕು

## ಯಾರ ಪಾಪ ಯಾರಿಗೆ?

237 ಅನ್ನಾದೇಭ್ರೂಣಹಾ ಮಾರ್ಷ್ಟಿ ಪತ್ಯೌ ಭಾರ್ಯಾಽಪಚಾರಿಣೀ ।
ಗುರೌ ಶಿಷ್ಯಶ್ಚ ಯಾಜ್ಯಶ್ಚ ಸ್ತೇನೋ ರಾಜನಿ ಕಿಲ್ಬಿಷಮ್ ॥ -VIII 317

ಭ್ರೂಣಹತ್ಯೆಯನ್ನು ಮಾಡಿದವನ ಪಾಪವು ಅವನ ಮನೆಯಲ್ಲಿ ಅನ್ನವನ್ನು ಸ್ವೀಕರಿಸುವವನಿಗೂ, ವ್ಯಭಿಚಾರಿಣಿಯಾದ ಸ್ತ್ರೀಯ ಪಾಪವು ಅದನ್ನು ತಿಳಿದೂ ಸುಮ್ಮನಿರುವ ಅವಳ ಗಂಡನಿಗೂ, ಶಿಷ್ಯನ ಪಾಪವು ಗುರುವಿಗೂ, ಯಜ್ಞ ಮಾಡುವವನ ಪಾಪವು ಪುರೋಹಿತನಿಗೂ, ಕಳ್ಳನ ಪಾಪವು ಅದನ್ನು ಉದಾಸೀನ ಮಾಡುವ ರಾಜನಿಗೂ ತಗಲುತ್ತದೆ

## ಕೆಲವೊಮ್ಮೆ ಬ್ರಾಹ್ಮಣನೂ ಯುದ್ಧಮಾಡಬೇಕು

238. ಶಸ್ತ್ರಂ ದ್ವಿಜಾತಿಭಿರ್ಗ್ರಾಹ್ಯಂ ಧರ್ಮೋ ಯತ್ರೋಪರುಧ್ಯತೇ ।
ದ್ವಿಜಾತೀನಾಂ ಚ ವರ್ಣಾನಾಂ ವಿಪ್ಲವೇ ಕಾಲಕಾರಿತೇ[1] ॥ -VIII 348

ಧರ್ಮಕ್ಕೆ ಹಾನಿಯುಂಟಾಗುವ ಸಂದರ್ಭದಲ್ಲಿ ಬ್ರಾಹ್ಮಣನೂ ಶಸ್ತ್ರಕ್ಕೆ ಕೈಹಾಕಬೇಕಾಗುತ್ತದೆ; ಕಾಲಬಲದಿಂದ ದೇಶಕ್ಕೆ ವಿಪ್ಲವ ಉಂಟಾದಾಗ್ಯೂ, ದ್ವಿಜವರ್ಣಗಳಲ್ಲಿ ಸಾಂಕರ್ಯ ಉಂಟಾಗುವ ಸಮಯದಲ್ಲೂ ಅವನಿಗೆ ಯುದ್ಧವು ಕರ್ತವ್ಯವೇ ಸರಿ.

[1] ವಿಪ್ರೋಽಪಿ ಯುದ್ಧ್ಯೇತ ಮಹಾಪ್ರಭಾವಃ - ಮಹಾಭಾರತ (12/3/17)

239 ಆತ್ಮನಶ್ಚ ಪರಿತ್ರಾಣೇ ದಕ್ಷಿಣಾನಾಂ ಚ ಸಂಗರೇ ।
ಸ್ತ್ರೀವಿಪ್ರಾಭ್ಯುಪಪತ್ತೌ ಚ ಘ್ನನ್ ಧರ್ಮೇಣ ನ ದುಷ್ಯತಿ ॥ -VIII 349

ಆತ್ಮರಕ್ಷಣೆಗಾಗಿಯೂ, ದಕ್ಷಿಣೆಯಾಗಿ ಬಂದ ವಸ್ತುಗಳ ಬಗ್ಗೆ ಕಲಹ ಉಂಟಾದಾಗಲೂ, ಸ್ತ್ರೀಯರಿಗೆ, ವಿಪ್ರರಿಗೆ ಆಪತ್ತು ಒದಗಿದಾಗಲೂ, ಯುದ್ಧ ಕಾರ್ಯದಲ್ಲಿ ತೊಡಗುವ ಬ್ರಾಹ್ಮಣನಿಗೆ ಸ್ವಧರ್ಮಹಾನಿರೂಪ ದೋಷವು ಬರುವುದಿಲ್ಲ

## ಆತತಾಯಿಗಳನ್ನು ಕೊಲ್ಲುವುದು ಪಾಪಕರವಲ್ಲ

240 [1]ಗುರುಂ ವಾ ಬಾಲವೃದ್ಧೌ ವಾ ಬ್ರಾಹ್ಮಣಂ ಚ ಬಹುಶ್ರುತಂ ।
[2]ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್ ॥ -VIII 350

ಆತತಾಯಿಯಾದವನನ್ನು ಅವನು ಗುರುವೇ ಆಗಿರಲಿ ಬಾಲಕನೇ ಆಗಿರಲಿ ವೃದ್ಧನೇ ಆಗಿರಲಿ, ವಿದ್ಯಾವಂತನಾದ ಬ್ರಾಹ್ಮಣನೇ ಆಗಿರಲಿ, ನಿಶ್ಚಿಂತೆಯಿಂದ ಸಂಹರಿಸಿಬಿಡಬೇಕು

241 ನಾತತಾಯಿವಧೇ ದೋಷೋ ಹಂತುರ್ಭವತಿ ಕಶ್ಚನ ।
ಪ್ರಕಾಶಂ ವಾಽ ಪ್ರಕಾಶಂ ವಾ ಮನ್ಯುಸ್ತಂ ಮನ್ಯುಮೃಚ್ಛತಿ ॥ -VIII 351

ಆತತಾಯಿಯನ್ನು ಕೊಲ್ಲುವವನಿಗೆ ಹತ್ಯಾದೋಷವು ಬರುವುದಿಲ್ಲ ಅದು ಅಧರ್ಮಕ್ಕೆ ಸಲ್ಲಬೇಕಾದ ಧರ್ಮಸಂಮತವಾದ ಪ್ರತಿಭಟನೆಯೇ ಸರಿ.

## ವರ್ಣದ ವಿಚಾರ

242 ಅನಾರ್ಯತಾ ನಿಷ್ಠುರತಾ ಕ್ರೂರತಾ ನಿಷ್ಕ್ರಿಯಾತ್ಮತಾ ।
ಪುರುಷಂ ವ್ಯಂಜಯಂತೀಹ ಲೋಕೇ ಕಲುಷಯೋನಿಜಮ್ ॥ -X 58

---

1 ನಾರಾಯಣದ್ವಿಟ್‌ತದನುಬಂಧಿನಿಗ್ರಹಃ ಕ್ಷತ್ರಿಯಾಣಾಂ ಪರಮೋ ಧರ್ಮಃ ॥
-ಶ್ರೀಮಧ್ವಾಚಾರ್ಯರ ಗೀತಾತಾತ್ಪರ್ಯನಿರ್ಣಯ

2 ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ ।
ಕ್ಷೇತ್ರದಾರಾಪಹಾರೀ ಚ ಷಡೇತೇ ಹ್ಯಾತತಾಯಿನಃ ॥
ಮಹಾಭಾರತ-6/107/110

ದುಷ್ಟ ಮನೋಭಾವ, ಕ್ರೂರತನ, ಕಠೋರತೆ, ಸ್ವಕರ್ತವ್ಯತ್ಯಾಗ ಇವುಗಳು ಒಬ್ಬನು ಶುದ್ಧಜಾತಿಯವನಲ್ಲ ಎಂಬುದನ್ನು ಬೆರಳು ಮಾಡಿತೋರಿಸುತ್ತವೆ

243 ಕುಲೇ ಮುಖ್ಯೇಽಪಿ ಜಾತಸ್ಯ ಯಸ್ಯ ಸ್ಯಾದ್ಯೋನಿಸಂಕರಃ ।
ಸಂಕ್ರಮತ್ಯೇವ ತಚ್ಛೀಲಂ ನರೋಽಲ್ಪಮಪಿ ವಾ ಬಹು ॥ -X60

ಒಬ್ಬನು ಶ್ರೇಷ್ಠ ಕುಲದಲ್ಲಿ ಜನ್ಮ ತಳೆದಿದ್ದರೂ, ಅವನ ಹುಟ್ಟಿನಲ್ಲಿ ವ್ಯಭಿಚಾರಾದಿ ದೋಷಗಳ ಹಿನ್ನೆಲೆ ಇದ್ದಲ್ಲಿ, ಅದಕ್ಕೆ ಉಚಿತವೆನ್ನಿಸುವ ತನ್ನ ಜಾತಿಗೆ ವಿರುದ್ಧವಾದ ಗುಣಗಳನ್ನು ಅವನೂ ಹೊಂದಿರುತ್ತಾನೆ.

## ವರ್ಣ ಧರ್ಮಗಳು

244. ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ ।
ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೇಽಬ್ರವೀನ್ಮನುಃ ॥ -X 63

ಅಹಿಂಸೆ, ಸತ್ಯ, ಕಳ್ಳತನ ಮಾಡದಿರುವಿಕೆ, ಶುಚಿತ್ವ ಮತ್ತು ಇಂದ್ರಿಯನಿಗ್ರಹ ಈ ಎಲ್ಲವೂ ನಾಲ್ಕು ವರ್ಣದವರಿಗೂ ಒಟ್ಟಾಗಿಯೇ ಧರ್ಮಗಳು ಎಂಬುದಾಗಿ ಮನುವು ಹೇಳಿರುವನು.

245. ಅಧ್ಯಾಪನಮಧ್ಯಯನಂ ಯಜನಂ ಯಾಜನಂ ತಥಾ ।
ದಾನಂ ಪ್ರತಿಗ್ರಹಂ ಚೈವ ಬ್ರಾಹ್ಮಣಾನಾಮಕಲ್ಪಯತ್ ॥ -I 88

[1]ತಾನು ಶಾಸ್ತ್ರಗಳನ್ನು ಕಲಿಯುವುದು, ಮತ್ತೊಬ್ಬರಿಗೆ ಕಲಿಸುವುದು, ಯಜ್ಞ ಮಾಡುವುದು, ಮಾಡಿಸುವುದು, ದಾನ ಕೊಡುವುದು ಮತ್ತು ದಾನ ತೆಗೆದುಕೊಳ್ಳುವುದು ಇವೆಲ್ಲ ಬ್ರಾಹ್ಮಣನ ಕರ್ತವ್ಯಗಳು.

246. ಪ್ರಜಾನಾಂ ರಕ್ಷಣಂ ದಾನಮಿಜ್ಯಾಽಧ್ಯಯನಮೇವ ಚ ।
ವಿಷಯೇಷ್ವಪ್ರಸಕ್ತಿಶ್ಚ ಕ್ಷತ್ರಿಯಸ್ಯ ಸಮಾಸತಃ ॥ -I 86

---

1 ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಾಹ್ಮಂ ಕರ್ಮ ಸ್ವಭಾವಜಂ ॥
ಗೀತಾ (18/42)

ಪ್ರಜೆಗಳ ರಕ್ಷಣೆ, ದಾನ ಕೊಡುವುದು, ಯಜ್ಞಮಾಡುವುದು, ಅಧ್ಯಯನ ಮತ್ತು ವಿಷಯಗಳಲ್ಲಿ ಲೋಲುಪನಾಗದಿರುವುದು ಇವು ಕ್ಷತ್ರಿಯನ ಮುಖ್ಯ ಧರ್ಮಗಳು[1]

247 ಪಶೂನಾಂ ರಕ್ಷಣಂ ದಾನಮಿಜ್ಯಾಧ್ಯಯನಮೇವ ಚ ।
ವಣಿಕ್‌ಪಥಂ ಕುಸೀದಂ ಚ ವೈಶ್ಯಸ್ಯ[2] ಕೃಷಿಮೇವ ಚ ॥ -I 90

ಪಶುಪಾಲನೆ, ದಾನ, ಅಧ್ಯಯನ, ವ್ಯಾಪಾರ, ಬಡ್ಡಿಗೆ ಹಣವನ್ನು ಕೊಡುವುದು ಮತ್ತು ಕೃಷಿ ಇವು ವೈಶ್ಯಧರ್ಮಗಳು.

248 ಏಕಮೇವ ತು ಶೂದ್ರಸ್ಯ[3] ಪ್ರಭುಃ ಕರ್ಮ ಸಮಾದಿಶತ್ ।
ಏತೇಷಾಮೇವ ವರ್ಣಾನಾಂ ಶುಶ್ರೂಷಾಮನಸೂಯಯಾ ॥
-I 91

ಮೇಲ್ಕಂಡ ಮೂರು ವರ್ಣಗಳನ್ನು ಕಪಟ ವಂಚನೆಗಳಿಲ್ಲದೆ ಶುಶ್ರೂಷೆಮಾಡುವುದು ಶೂದ್ರನ ಪಾಲಿನ ಮುಖ್ಯ ಕರ್ತವ್ಯ

249 [4]ವೇದಾಭ್ಯಾಸೋ ಬ್ರಾಹ್ಮಣಸ್ಯ ಕ್ಷತ್ರಿಯಸ್ಯ[5] ಚ ರಕ್ಷಣಮ್ ।
ವಾರ್ತಾಕರ್ಮೈವ ವೈಶ್ಯಸ್ಯ ವಿಶಿಷ್ಟಾನಿ ಸ್ವಕರ್ಮಸು ॥ -X 80

ಬ್ರಾಹ್ಮಣನಿಗೆ ತನ್ನ ಉಳಿದೆಲ್ಲ ಧರ್ಮಗಳಲ್ಲೂ ವೇದಾಭ್ಯಾಸವೇ ಹೆಚ್ಚಿನ ಧರ್ಮ, ಕ್ಷತ್ರಿಯನಿಗೆ ಪ್ರಜಾಪಾಲನೆಯೇ ಮುಖ್ಯ ಕರ್ತವ್ಯ, ವಾರ್ತಾ ಕರ್ಮವೇ ವೈಶ್ಯನ ಶ್ರೇಷ್ಠ ಕರ್ತವ್ಯ.

---

[1] ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।
ದಾನಮೀಶ್ವರಭಾವಶ್ಚ ಕ್ಷತ್ರಕಾರ್ಮ ಸ್ವಭಾವಜಮ್ ॥
- ಗೀತಾ 18/43

[2] ಕೃಷಿಗೋರಕ್ಷವಾಣಿಜ್ಯಂ ವೈಶ್ಯಕರ್ಮಸ್ವಭಾವಜಮ್ ॥
- ಗೀತಾ 18/44

[3] ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥
- ಗೀತಾ (18/44)

[4] ವಿಪ್ರಸ್ಯ ಜಪೋಪದೇಶೌ - (ಮ ಭಾ.ಶಾ ಪಿ. 22/107)

[5] ಕ್ಷತ್ರಿಯಸ್ಯ ಪರೋ ಧರ್ಮೋ ಧರ್ಮಜ್ಞಾನಾನುಪಾಲನಮ್ ॥
- ಮ. ಭಾ ಶಾ.ಪಿ 29/8

250 ಬ್ರಾಹ್ಮಣಸ್ಯ ತಪೋ ಜ್ಞಾನಂ ತಪಃ ಕ್ಷತ್ರಸ್ಯ ರಕ್ಷಣಮ್ ॥
ವೈಶ್ಯಸ್ಯ ತು ತಪೋ ವಾರ್ತಾ ತಪಃ ಶೂದ್ರಸ್ಯ ಸೇವನಮ್ ॥

-X 236

ಬ್ರಾಹ್ಮಣನಿಗೆ ಜ್ಞಾನವೇ ತಪಸ್ಸು; ಕ್ಷತ್ರಿಯನಿಗೆ ಪ್ರಜಾಪಾಲನೆಯೇ ತಪಸ್ಸು, ವಾರ್ತಾಕರ್ಮವೇ ವೈಶ್ಯನಿಗೆ ತಪಸ್ಸು; ಶೂದ್ರನಿಗೆ ಸೇವೆಯೇ ತಪಸ್ಸು

## ಅಧ್ಯಯನವೇ ಬ್ರಾಹ್ಮಣನಿಗೆ ಮಹಾ ತಪಸ್ಸು

251 ವೇದಮೇವ ಸದಾಽಭ್ಯಸ್ಯೇತ್ ತಪಸ್ತಪ್ಸ್ಯನ್ ದ್ವಿಜೋತ್ತಮಃ ।
ವೇದಾಭ್ಯಾಸೋ ಹಿ ವಿಪ್ರಸ್ಯ ತಪಃ ಪರಮಿಹೋಚ್ಯತೇ[1] ॥ -II 166

ತಪಸ್ಸನ್ನು ಬಯಸುವ ದ್ವಿಜೋತ್ತಮನು ಸದಾ ವೇದಾಧ್ಯಯನದಲ್ಲೇ ನಿರತನಾಗಬೇಕು. ವೇದಾಭ್ಯಾಸವೇ ಬ್ರಾಹ್ಮಣನಿಗೆ ದೊಡ್ಡ ತಪಸ್ಸು ಎನ್ನಿಸುತ್ತದೆ.

252. [2]ಸರ್ವಾನ್ ಪರಿತ್ಯಜೇದರ್ಥಾನ್ ಸ್ವಾಧ್ಯಾಯಸ್ಯ ವಿರೋಧಿನಃ ।
ಯಥಾ ತಥಾಽಧ್ಯಾಪಯಂಸ್ತು ಸಾ ಹ್ಯಸ್ಯ ಕೃತಕೃತ್ಯತಾ ॥ -IV 17

ಸ್ವಾಧ್ಯಾಯಕ್ಕೆ ಅಡ್ಡಿಯಾಗುವ ಎಲ್ಲಾ ವಿಷಯಗಳನ್ನೂ ಬಿಟ್ಟುಬಿಡಬೇಕು ತಾನಾಗಿ ಒದಗಿ ಬರುವ ಸಹಾಯವನ್ನು ಮಾತ್ರ ಆಶ್ರಯಿಸಿ ಅಧ್ಯಾಪನ ಕಾರ್ಯದಲ್ಲಿ ತೊಡಗಬೇಕು ಅದರಿಂದ ಮಾತ್ರವೇ ಬ್ರಾಹ್ಮಣನಿಗೆ ಕೃತಕೃತ್ಯತೆ.

---

1 ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ ।
ತದ್ಧಿತಪಸ್ತದ್ಧಿ ತಪಃ । -ತೈತ್ತಿರೀಯೋಪನಿಷತ್

2 ಸೌಲಭ್ಯೇ ಶ್ರವಣಾದೀನಾಮನ್ಯತ್ ಸಂಕೋಚಮರ್ಹತಿ ।
ಶ್ರವಣಾದೀನಾಂ ತು ಸಂಕೋಚಃ ನೈವ ಕಾರ್ಯಃ ಕಥಂಚನ ॥

-ಯೋಗದೀಪಿಕಾ (3/87, 88)

ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್ ॥

-ಅನುವ್ಯಾಖ್ಯಾನ (3/3/1)

ಸರ್ವಂ ಕರ್ಮಾಖಿಲಂ ಪಾರ್ಥಂ ಜ್ಞಾನೇ ಪರಿಸಮಾಪ್ಯತೇ । (ಗೀತಾ 4/33)

253. ಯಥೋಕ್ತಾನ್ಯಪಿ ಕರ್ಮಾಣಿ ಪರಿಹಾಯ ದ್ವಿಜೋತ್ತಮಃ ।
ಆತ್ಮಜ್ಞಾನೇ ಶಮೇ ಚ ಸ್ಯಾದ್ವೇದಾಭ್ಯಾಸೇ ಚ ಯತ್ನವಾನ್ ॥ -XII 92

ತನಗೆ ವಿಧಿಸಲ್ಪಟ್ಟಿರುವ ಇತರ ಕರ್ಮಗಳನ್ನು ಬಿಟ್ಟುಕೊಟ್ಟಾದರೂ ಸರಿಯೇ, ಬ್ರಾಹ್ಮಣನಾದವನು ಪರಮಾತ್ಮನನ್ನು ತಿಳಿಯುವ ಕಾರ್ಯದಲ್ಲೂ, ಮನಸ್ಸಿನ ಏಕಾಗ್ರತೆಯನ್ನು ಸಾಧಿಸುವ ವಿಷಯದಲ್ಲಿಯೂ ಮತ್ತು ವೇದಾದಿ ಸಚ್ಛಾಸ್ತ್ರಗಳನ್ನು ಅಧ್ಯಯನ ಮಾಡುವುದರಲ್ಲಿಯೂ ವಿಶೇಷ ಪ್ರಯತ್ನವನ್ನು ಸದಾ ಮಾಡುತ್ತಿರಬೇಕು.

## ಸಂಧ್ಯಾವಂದನೆಯ ಮಹತ್ವ

254. ಋಷಯೋ *ದೀರ್ಘಸಂಧ್ಯತ್ವಾದ್ದೀರ್ಘಮಾಯುರವಾಪ್ನುಯುಃ ।
ಪ್ರಜ್ಞಾಂ ಯಶಶ್ಚ ಕೀರ್ತಿಂ ಚ ಬ್ರಹ್ಮವರ್ಚಸಮೇವ ಚ ॥ -IV 94

ದೀರ್ಘಕಾಲ ಸಂಧ್ಯಾವಂದನೆಯನ್ನು ಮಾಡುವುದರಿಂದಾಗಿ ಋಷಿಗಳು, ದೀರ್ಘಾಯುಷ್ಯ, ಪ್ರಜ್ಞೆ, ಯಶಸ್ಸು, ಕೀರ್ತಿ ಮತ್ತು ಬ್ರಹ್ಮವರ್ಚಸ್ಸುಗಳನ್ನು ಸಂಪಾದಿಸಿಕೊಂಡರು. ಆದ್ದರಿಂದ ಸಂಧ್ಯಾಕಾಲಗಳಲ್ಲಿ ಭಗವಂತನನ್ನು ಧ್ಯಾನಿಸುವುದು ತುಂಬಾ ಮಹತ್ವದ ಕರ್ತವ್ಯ

## ಪಂಚಮಹಾಯಜ್ಞಗಳು ಮತ್ತು ಅವುಗಳ ಅವಶ್ಯಕತೆ

255. ಋಷಿಯಜ್ಞಂ ದೇವಯಜ್ಞಂ ಭೂತಯಜ್ಞಂ ಚ ಸರ್ವದಾ ।
ನೃಯಜ್ಞಂ ಪಿತೃಯಜ್ಞಂ ಚ ಯಥಾಶಕ್ತಿ ನ ಹಾಪಯೇತ್ ॥ -IV 21

ಋಷಿಯಜ್ಞ, ದೇವಯಜ್ಞ, ಭೂತಯಜ್ಞ, ಮನುಷ್ಯಯಜ್ಞ ಮತ್ತು ಪಿತೃಯಜ್ಞ ಇವುಗಳನ್ನು ಪ್ರತಿನಿತ್ಯ ತಪ್ಪದೇ ಆಚರಿಸಬೇಕು.

256. ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಮ್ ।
ಹೋಮೋ ದೈವೋ ಬಲಿರ್ಭೌತೋ ನೃಯಜ್ಞೋಽತಿಥಿಪೂಜನಮ್ ॥-III 70

---

* ಸಹಸ್ರಂ ಪರಮಾಂ ದೇವೀಂ ಶತಮಧ್ಯಾಂ ದಶಾವರಾಂ । (ಸದಾಚಾರಸ್ಮೃತಿಃ)

ಪಾಠಪ್ರವಚನಗಳು ಬ್ರಹ್ಮಯಜ್ಞ (ಋಷಿಯಜ್ಞ), ತರ್ಪಣಾದಿಗಳು ಪಿತೃಯಜ್ಞ; ವೈಶ್ವದೇವಾದಿ ಹೋಮಕಾರ್ಯಗಳು ದೇವಯಜ್ಞ; ಸರ್ವಪ್ರಾಣಿಗಳಿಗೂ ಅರ್ಪಿಸುವ ಬಲಿಯೇ ಭೂತಯಜ್ಞ ಮತ್ತು ಅತಿಥಿ ಪೂಜೆಯೇ ಮನುಷ್ಯಯಜ್ಞ

257 ಪಂಚಸೂನಾ ಗೃಹಸ್ಥಸ್ಯ ಚುಲ್ಲೀ ವೇಷಣ್ಯುಪಸ್ಕರಃ ।
ಕಂಡನೀ ಚೋದಕುಂಭಶ್ಚ ಬಧ್ಯತೇ ಯಾಸ್ತು ವಾಹಯನ್ ॥ -III 68

ಶಾಕಗಳನ್ನು ಕಡಿಯುವುದು, ಅರೆಯುವುದು, ಹುರಿಯುವುದು, ಬೇಯಿಸುವುದು ಮತ್ತು ಸುಡುವುದು ಎಂಬ ಐದು ರೀತಿಯ ಹಿಂಸೆಗಳು ಗೃಹಸ್ಥನು ಆಹಾರ ತಯಾರು ಮಾಡುವ ಪ್ರಸಂಗದಲ್ಲಿ ಘಟಿಸುತ್ತವೆ. ಅಂತಹ ಹಿಂಸೆಗಳಿಂದಾಗಿ ಗೃಹಸ್ಥನು ಬಹಳ ರೀತಿಯ ದುಃಖವನ್ನು ಅನುಭವಿಸಬೇಕಾಗುತ್ತದೆ.*

258. ತಾಸಾಂ ಕ್ರಮೇಣ ಸರ್ವಾಸಾಂ ನಿಷ್ಕೃತ್ಯರ್ಥಂ ಮಹರ್ಷಿಭಿಃ ।
ಪಂಚ ಕ್ಲೃಪ್ತಾ ಮಹಾಯಜ್ಞಾಃ ಪ್ರತ್ಯಹಂ ಗೃಹಮೇಧಿನಾಮ್ ॥ -III 69

ಆ ಎಲ್ಲ ವಿಧ ಪಾಪಗಳ ಪರಿಹಾರಕ್ಕೋಸ್ಕರವಾಗಿ ಪಂಚಮಹಾಯಜ್ಞಗಳು ಗೃಹಸ್ಥರ ಪಾಲಿನ ದೈನಂದಿನ ಕರ್ತವ್ಯಗಳಾಗಿ ಮಹರ್ಷಿಗಳಿಂದ ವಿಧಿಸಲ್ಪಟ್ಟಿವೆ.

## ಯಜ್ಞಾರ್ಹವಾದ ಸ್ಥಳ

259. ಕೃಷ್ಣಸಾರಸ್ತು ಚರತಿ ಮೃಗೋ ಯತ್ರ ಸ್ವಭಾವತಃ ।
ಸ ಜ್ಞೇಯೋ ಯಜ್ಞಿಯೋ ದೇಶೋ ಮ್ಲೇಚ್ಛದೇಶಸ್ತ್ವತಃ ಪರಃ ॥ -II 23

---

* ಕುಟ್ಟಿ ಯೊಯ್ದುದನಟ್ಟು ಇಟ್ಟುದ ಸುಟ್ಟು ಕೊಟ್ಟುದ ಮುಟ್ಟಲಘ ಹಿ- ।
ಟ್ಟಿಟ್ಟು ಮಾಳ್ಪುದು ವಿಠ್ಠಲುಂಡುಚ್ಛಿಷ್ಟ ಸಜ್ಜನರ ।
ಬಿಟ್ಟು ತನ್ನಯ ಹೊಟ್ಟೆಗೋಸುಗ ಧಟ್ಟನುಣುತಿಹ ಕೆಟ್ಟ ಮನುಜರ ।
ಕಟ್ಟಿ ಒಯ್ದು ಮಪಟ್ಟಣದೊಳೊತ್ತಟ್ಟಲಿಡುತಿಹರು ॥
-ಶ್ರೀಜಗನ್ನಾಥದಾಸರು (ಹರಿಕಥಾಮೃತಸಾರ-22/29)

ಕೃಷ್ಣಸಾರ ಮೃಗವು ಸ್ವಾಭಾವಿಕವಾಗಿಯೇ ನೆಲೆಸಿರುವ ಸ್ಥಳವು ಯಜ್ಞಕಾರ್ಯಗಳಿಗೆ ಯೋಗ್ಯವೆನಿಸುತ್ತದೆ; ಉಳಿದದ್ದೆಲ್ಲ 'ಮ್ಲೇಚ್ಛದೇಶ'.

## ಯಜ್ಞಕ್ಕೆ ಬಹಳ ಧನ ಬೇಕು

260 ಇಂದ್ರಿಯಾಣಿ ಯಶಃ ಸ್ವರ್ಗಮಾಯುಃ ಕೀರ್ತಿಂ ಪ್ರಜಾಃ ಪಶೂನ್ ।
ಹಂತ್ಯಲ್ಪದಕ್ಷಿಣೋ[1] ಯಜ್ಞಸ್ತಸ್ಮಾನ್ನಾಲ್ಪಧನೋ ಯಜೇತ್ ॥ -XI 40

ಅಲ್ಪದಕ್ಷಿಣೆಯಿಂದ ಕೂಡಿದ ಯಜ್ಞವು ಇಂದ್ರಿಯಗಳು, ಯಶಸ್ಸು, ಸ್ವರ್ಗ, ಆಯುಷ್ಯ, ಕೀರ್ತಿ, ಸಂತಾನ, ಪಶುಗಳು, ಮೊದಲಾದವುಗಳನ್ನೆಲ್ಲಾ ನಾಶಪಡಿಸುತ್ತವೆ ಆದ್ದರಿಂದ ಸಾಕಷ್ಟು ದ್ರವ್ಯವನ್ನು ಹೊಂದದೆ, ಯಜ್ಞಗಳನ್ನು ಮಾಡಕೂಡದು.

## ಯಜ್ಞದ ಹೆಸರಿನಲ್ಲಿ ಧನಸಂಪಾದನೆಯು ಹೇಯ

261 ಯಜ್ಞಾರ್ಥಮರ್ಥಂ ಭಿಕ್ಷಿತ್ವಾ ಯೋ ನ ಸರ್ವಂ ಪ್ರಯಚ್ಛತಿ ।
ಸ ಯಾತಿ ಭಾಸತಾಂ ವಿಪ್ರಃ ಕಾಕತಾಂ ವಾ ಶತಂ ಸಮಾಃ ॥ -XI 25

ಯಜ್ಞಕ್ಕೆಂದು ಹಣವನ್ನು ಸಂಗ್ರಹಿಸಿ, ಅದನ್ನು ಸಂಪೂರ್ಣವಾಗಿ ವಿನಿಯೋಗಿಸದೇ ತನಗಾಗಿ ಉಳಿಸಿಕೊಳ್ಳುವವನು, ನೂರಾರು ವರ್ಷಗಳ ಕಾಲ 'ಭಾಸಪಕ್ಷಿ' ಯಾಗಿಯೋ, ಕಾಗೆಯಾಗಿಯೋ ಹುಟ್ಟಬೇಕಾಗುತ್ತದೆ

## ಆಪತ್ಕಾಲದಲ್ಲಿ ಪರಪಾಕವು ಗ್ರಾಹ್ಯ

262. [2]ಜೀವಿತಾತ್ಯಯಮಾಪನ್ನೋ ಯೋಽನ್ನಮತ್ತಿ ಯತಸ್ತತಃ ।
ಆಕಾಶಮಿವ ಪಂಕೇನ ನ ಸ ಪಾಪೇನ ಲಿಪ್ಯತೇ ॥ -X 104

ಪ್ರಾಣ ಸಂಕಟ ಒದಗಿದಾಗ ಮಾತ್ರ ಪರಾನ್ನವನ್ನು ತಿನ್ನುವ ಮನುಷ್ಯನು ಅನ್ನ ಕೊಟ್ಟವನ ಪಾಪಗಳಿಗೆ ಭಾಗಿ ಎನ್ನಿಸಲಾರನು.

---

1 ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ -ಗೀತಾ 17/13

2 ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ॥
-ಬ್ರಹ್ಮಸೂತ್ರ (3/4/28)

## ಶಕ್ತಿಯಿದ್ದೂ ಅಶಕ್ತನಂತೆ ವರ್ತಿಸುವುದು ಪಾಪಕರ

263 ಆಪತ್ಕಲ್ಪೇನ ಯೋ ಧರ್ಮಂ ಕುರುತೇಽನಾಪದಿ ದ್ವಿಜಃ ।
ನ ನಾಪ್ನೋತಿ ಫಲಂ ತಸ್ಯ ಪರತ್ರೇತಿ ವಿಚಾರಿತಮ್ ॥ -XI 28

ಆಪತ್ಕಾಲದಲ್ಲಿ ಮಾತ್ರ ಆಚರಿಸಬೇಕಾದ ಧರ್ಮಗಳನ್ನು ಆಪತ್ತಿಲ್ಲದಿರುವಾಗಲೂ ಆಚರಿಸುವ ದ್ವಿಜನು ಅದರ ಫಲಕ್ಕೆ ಇಲ್ಲಾಗಲಿ ಪರಲೋಕದಲ್ಲಾಗಲೀ ಅರ್ಹನೆನ್ನಿಸಲಾರನು

264. ಪ್ರಭುಃ ಪ್ರಥಮಕಲ್ಪಸ್ಯ ಯೋಽನುಕಲ್ಪೇನ ವರ್ತತೇ ।
ನ ಸಾಂಪರಾಯಿಕಂ ತಸ್ಯ ದುರ್ಮತೇರ್ವಿದ್ಯತೇ ಫಲಂ ॥ -XI 30

ಉತ್ತಮ ರೀತಿಯಲ್ಲಿ ತನ್ನ ಕರ್ತವ್ಯಗಳನ್ನು ನಿರ್ವಹಿಸುವ ಸಾಮರ್ಥ್ಯವನ್ನು ಹೊಂದಿದ್ದರೂ, ಅಶಕ್ತನಂತೆ ಸಾಮಾನ್ಯ ರೀತಿಯಲ್ಲಿ ಧರ್ಮವನ್ನು ಆಚರಿಸುವ ದುಷ್ಟ ಬುದ್ಧಿಯ ಮನುಷ್ಯನಿಗೆ ಪರಲೋಕದಲ್ಲಿ ಶ್ರೇಯಸ್ಸು ದೊರೆಯಲಾರದು.

## ಜ್ಞಾನದಲ್ಲಿ ತಾರತಮ್ಯ

265. ಅಜ್ಞೇಭ್ಯೋ ಗ್ರಂಥಿನಃ ಶ್ರೇಷ್ಠಾ ಗ್ರಂಥಿಭ್ಯೋ ಧಾರಿಣೋ ವರಾಃ ।
ಧಾರಿಭ್ಯೋ ಜ್ಞಾನಿನಃ ಶ್ರೇಷ್ಠಾ ಜ್ಞಾನಿಭ್ಯೋ ವ್ಯವಸಾಯಿನಃ ॥ -XII 103

ಅಜ್ಞಾನಿಗಳಿಗಿಂತ ಶಾಸ್ತ್ರಗಳನ್ನು ಓದಿದವರು ಶ್ರೇಷ್ಠರು, ಅವರಿಗಿಂತ ಅವುಗಳನ್ನು ಆವರ್ತನೆ ಮಾಡುವವರು ಶ್ರೇಷ್ಠರು; ಅವರಿಗಿಂತಲೂ ಅವುಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡವರು ಶ್ರೇಷ್ಠರು; ಅವರಿಗಿಂತಲೂ ಕಲಿತದ್ದನ್ನು ಅನುಷ್ಠಾನ ಮಾಡುವವರು ದೊಡ್ಡವರು.

## ಹೀಗೆ ವರ್ತಿಸಬೇಕು

266. ದೃಷ್ಟಿಪೂತಂ ನ್ಯಸೇತ್ ಪಾದಂ ವಸ್ತ್ರಪೂತಂ ಪಿಬೇಜ್ಜಲಮ್ ।
ಸತ್ಯಪೂತಾಂ ವದೇದ್ವಾಚಂ ಮನಃಪೂತಂ ಸಮಾಚರೇತ್ ॥ -VI 46

ಚೆನ್ನಾಗಿ ಪರಿಶೀಲಿಸಿ ಹೆಜ್ಜೆಯನ್ನಿರಿಸಬೇಕು, ವಸ್ತ್ರದಿಂದ ಶೋಧಿಸಿದ ಶುದ್ಧ ನೀರನ್ನು ಕುಡಿಯಬೇಕು, ಸತ್ಯದಿಂದ ಪವಿತ್ರವಾದ ಮಾತನ್ನು ಆಡಬೇಕು, ಮನಶ್ಶುದ್ಧಿಯನ್ನು ಹೊಂದಿ ಕರ್ತವ್ಯಪರಾಯಣನಾಗಬೇಕು

## ಪ್ರಾಯಶ್ಚಿತ್ತ

267. ಅಕುರ್ವನ್ ವಿಹಿತಂ ಕರ್ಮ ನಿಂದಿತಂ ಚ ಸಮಾಚರನ್ ।
ಪ್ರಸಕ್ತಶ್ಚೇಂದ್ರಿಯಾರ್ಥೇಷು ಪ್ರಾಯಶ್ಚಿತ್ತೀಯತೇ ನರಃ । -XI 44

ಇಂದ್ರಿಯಲೋಲುಪನಾಗಿ ವಿಹಿತಕರ್ಮಗಳನ್ನು ಬಿಡುವ ಹಾಗೂ ನಿಷಿದ್ಧ ಕರ್ಮಗಳನ್ನು ಆಚರಿಸುವ ಮನುಷ್ಯನು ಆ ದೋಷಗಳ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೇಬೇಕು.

268 ಅಕಾಮತಃ ಕೃತೇ ಪಾಪೇ ಪ್ರಾಯಶ್ಚಿತ್ತಂ ವಿದುರ್ಬುಧಾಃ ।
ಕಾಮಕಾರಕೃತೇಽಪ್ಯಾಹುರೇಕೇ ಶ್ರುತಿನಿದರ್ಶನಾತ್ ॥ -XI 45

ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಉದ್ದೇಶಪೂರ್ವಕವಲ್ಲದೆ ಮಾಡಲ್ಪಟ್ಟ ಪಾಪಗಳಿಗೆ ಮಾತ್ರವೇ ಪ್ರಾಯಶ್ಚಿತ್ತದಿಂದ ಪರಿಹಾರ ದೊರಕುತ್ತದೆ; ಮತ್ತೆ ಕೆಲವು ವಿದ್ವಾಂಸರು, ಬಯಸಿ ಮಾಡಿದ ಪಾಪಗಳಿಗೂ ಪ್ರಾಯಶ್ಚಿತ್ತದಿಂದ ಪರಿಹಾರ ಸಾಧ್ಯ ಎನ್ನುತ್ತಾರೆ. ಎರಡೂ ಪಕ್ಷಗಳಿಗೂ ವೇದಗಳಲ್ಲಿ ಆಧಾರವಿರುವುದರಿಂದ ಎರಡೂ ಸರಿಯಾದುವೇ. ಆದರೆ ಪ್ರಾಯಶ್ಚಿತ್ತವಿಧಿಯು ಮಾತ್ರ ಎರಡಕ್ಕೂ ಬೇರೆ ಬೇರೆಯಾಗಿದೆ

269 ಅಕಾಮತಃ ಕೃತಂ ಪಾಪಂ ವೇದಾಭ್ಯಾಸೇನ ಶುದ್ಧ್ಯತಿ ।
ಕಾಮತಸ್ತು ಕೃತಂ ಪಾಪಂ ಪ್ರಾಯಶ್ಚಿತ್ತೈಃ ಪೃಥಗ್ವಿಧೈಃ ॥ -XI 46

ಇಷ್ಟವಿಲ್ಲದೆ ಘಟಿಸಿದ ಪಾಪವು ವೇದಾಭ್ಯಾಸದಿಂದ ಪರಿಹಾರವಾಗುತ್ತದೆ, ಇಷ್ಟಪಟ್ಟು ಮಾಡಲ್ಪಟ್ಟ ಪಾಪವು ಅನೇಕ ರೀತಿಯ ಯೋಗ್ಯ ಪ್ರಾಯಶ್ಚಿತ್ತಗಳಿಂದ ಶಮನಗೊಳ್ಳುತ್ತದೆ

## ತಪ್ಪು ಮಾಡಿದವನು ಪ್ರಾಯಶ್ಚಿತ್ತಮಾಡಿಕೊಳ್ಳಲೇಬೇಕು

270 ಪ್ರಾಯಶ್ಚಿತ್ತೀಯತಾಂ ಪ್ರಾಪ್ಯ ದೈವಾತ್ಪೂರ್ವಕೃತೇನ ವಾ ।
ನ ಸಂಸರ್ಗಂ ವ್ರಜೇತ್‌ಸದ್ಭಿಃ ಪ್ರಾಯಶ್ಚಿತ್ತೇಽಕೃತೇ ದ್ವಿಜಃ ॥ -XI 47

ದುರ್ದೈವದಿಂದಾಗಲೀ, ಪ್ರಾಚೀನ ಕರ್ಮದಿಂದಾಗಲೀ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾದಂತಹ ಪಾಪವನ್ನು ಹೊಂದಿರುವ ದ್ವಿಜನು, ಪ್ರಾಯಶ್ಚಿತ್ತ ಮಾಡಿಕೊಳ್ಳುವುದಕ್ಕಿಂತ ಮುಂಚಿತವಾಗಿ ಸಜ್ಜನರಲ್ಲಿ ಬೆರೆಯಬಾರದು.

## ವಿವಿಧ ಪಾಪಗಳೇ ದುರ್ಲಕ್ಷಣಗಳಿಗೆ ಕಾರಣ

271. ಇಹ ದುಶ್ಚರಿತೈಃ ಕೇಚಿತ್ ಕೇಚಿತ್ ಪೂರ್ವಕೃತೈಸ್ತಥಾ ।
ಪ್ರಾಪ್ನುವಂತಿ ದುರಾತ್ಮನೋ ನರಾ ರೂಪವಿಪರ್ಯಯಮ್ ॥ -XI 48

ಕೆಲವರು ಇಲ್ಲಿ ಮಾಡಿದ ಪಾಪಗಳಿಂದಾಗಿಯೂ, ಮತ್ತೆ ಕೆಲವರು ಜನ್ಮಾಂತರಗಳಲ್ಲಿ ಮಾಡಿದ ಪಾಪಗಳಿಂದಾಗಿಯೂ, ರೂಪಗಳಲ್ಲಿ ದುರ್ಲಕ್ಷಣಗಳನ್ನು ಹೊಂದುವರು.

## ಪ್ರಾಯಶ್ಚಿತ್ತ ಮಾಡಿಕೊಂಡರೆ ದುರ್ಲಕ್ಷಣಗಳು ದೂರಾಗುತ್ತವೆ

272 ಚರಿತವ್ಯಮತೋ ನಿತ್ಯಂ ಪ್ರಾಯಶ್ಚಿತ್ತಂ ವಿಶುದ್ಧಯೇ ।
ನಿಂದ್ಯೈರ್ಹಿ ಲಕ್ಷಣೈರ್ಯುಕ್ತಾ ಜಾಯಂತೇಽನಿಷ್ಕೃತೈನಸಃ ॥ -XI 54

ಆದ್ದರಿಂದ ಪಾಪಮಾಡಿದವರು ಸದಾ ಪರಿಶುದ್ಧಿಗೋಸ್ಕರ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೇಬೇಕು. ಇಲ್ಲವಾದಲ್ಲಿ ಪಾಪಗಳು ಹಾಗೆಯೇ ಉಳಿದುಕೊಂಡು ಮುಂದಿನ ಜನ್ಮಗಳಲ್ಲೂ ದುರ್ಲಕ್ಷಣಗಳನ್ನು ಹೊಂದಿಯೇ ಹುಟ್ಟಬೇಕಾಗುತ್ತದೆ

## ಪ್ರಾಯಶ್ಚಿತ್ತ ಮಾಡಿಕೊಂಡವರನ್ನು ಮೊದಲಿನಂತೆಯೇ ಆದರಿಸಬೇಕು

273 ಏನಸ್ವಿಭಿರನಿರ್ಣಿಕ್ತೈರ್ನಾರ್ಥಂ ಕಿಂಚಿತ್ ಸಹಾಚರೇತ್ ।
ಕೃತನಿರ್ಣೇಜನಾಂಶ್ಚೈವ ನ ಜುಗುಪ್ಸೇತ ಕರ್ಹಿಚಿತ್ ॥ -XI 190

ಪಾಪವನ್ನು ಮಾಡಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದ ಜನರೊಂದಿಗೆ ಸಂಪರ್ಕವನ್ನು ಇರಿಸಿಕೊಳ್ಳಕೂಡದು. ಆದರೆ ಪ್ರಾಯಶ್ಚಿತ್ತ ಮಾಡಿಕೊಂಡ ಜನಗಳನ್ನು ಯಾವರೀತಿಯಲ್ಲೂ ಅಸಹ್ಯಿಸಿಕೊಳ್ಳದೆ ಆದರದಿಂದ ಕಾಣಬೇಕು.

## ಪಾಪಪರಿಹಾರದ ಕೆಲವು ಮಾರ್ಗಗಳು.

274. ಖ್ಯಾಪನೇನಾನುತಾಪೇನ ತಪಸಾऽಧ್ಯಯನೇನ ಚ ।
ಪಾಪಕೃನ್ಮುಚ್ಯತೇ ಪಾಪಾತ್ತಥಾ ದಾನೇನ ಚಾಪದಿ ॥ -XI 228

ಆಪತ್ತಿಗೆ ಸಿಲುಕಿ ಪಾಪಕೃತ್ಯವನ್ನೆಸಗಿದವನು ಆ ತನ್ನ ಪಾಪವನ್ನು ಇನ್ನೊಬ್ಬರ ಮುಂದೆ ಹೇಳಿಕೊಳ್ಳುವುದು, ಪಶ್ಚಾತ್ತಾಪ ಪಡುವುದು, ತಪಸ್ಸು ಮಾಡುವುದು, ಅಧ್ಯಯನ ಮಾಡುವುದು, ದಾನಕೊಡುವುದು ಮೊದಲಾದ ಸಾಧನಗಳಿಂದ ಕಳೆದುಕೊಳ್ಳಬಹುದು

275. ಯಥಾ ಯಥಾ ನರೋऽಧರ್ಮಂ ಸ್ವಯಂ ಕೃತ್ವಾನುಭಾಷತೇ ।
ತಥಾ ತಥಾ ತ್ವಚೇವಾಹಿಸ್ತೇನಾಧರ್ಮೇಣ ಮುಚ್ಯತೇ ॥ -XI 229

ಪಾಪ ಕಾರ್ಯವನ್ನು ಮಾಡಿದ ಮನುಷ್ಯನು ಅದನ್ನು ಇತರರ ಮುಂದೆ ಬಹಿರಂಗ ಪಡಿಸುತ್ತಾ ಹೋದಂತೆಲ್ಲಾ ಹಾವು ಪೊರೆಯಿಂದ ಹೇಗೋ ಹಾಗೆ, ತಾನು ಪಾಪದಿಂದ ಬಿಡುಗಡೆ ಹೊಂದುತ್ತಾನೆ.

276. ಯಥಾ ಯಥಾ ಮನಸ್ತಸ್ಯ ದುಷ್ಕೃತಂ ಕರ್ಮ ಗರ್ಹತಿ ।
ತಥಾ ತಥಾ ಶರೀರಂ ತತ್ತೇನಾಧರ್ಮೇಣ ಮುಚ್ಯತೇ ॥ -XI 230

ಪಾಪಮಾಡಿದವನು ತನ್ನ ಪಾಪ ಕಾರ್ಯವನ್ನು ಮನಃಪೂರ್ವಕವಾಗಿ ನಿಂದಿಸುತ್ತ ಹೋದಂತೆಲ್ಲ ಆ ಪಾಪದ ಬಂಧನದಿಂದ ದೂರಾಗುತ್ತಾ ಬರುತ್ತಾನೆ.

277. ಕೃತ್ವಾ ಪಾಪಂ ಹಿ ಸಂತಪ್ಯ ತಸ್ಮಾತ್ ಪಾಪಾತ್ ಪ್ರಮುಚ್ಯತೇ ।
ನೈವಂ ಕುರ್ಯಾಂ ಪುನರಿತಿ ನಿವೃತ್ತ್ಯಾ ಪೂಯತೇ ತು ಸಃ ॥ -XI 231

ಪಾಪ ಮಾಡಿದಮೇಲೆ ಆ ಬಗ್ಗೆ ಬಹಳವಾಗಿ ದುಃಖಿಸುವುದರಿಂದ ಆ ಪಾಪದಿಂದ ಮುಕ್ತನಾಗುತ್ತಾನೆ. 'ಮತ್ತೊಮ್ಮೆ ಹೀಗೆಂದೂ ಮಾಡಲಾರೆ' ಎಂಬ ಸಂಕಲ್ಪವನ್ನು ಮಾಡುವುದರಿಂದ ಅವನು ಪರಿಶುದ್ಧನಾಗುತ್ತಾನೆ.

278 ಅಜ್ಞಾನಾದ್ಯದಿ ವಾ ಜ್ಞಾನಾತ್ ಕೃತ್ವಾ ಕರ್ಮ ವಿಗರ್ಹಿತಮ್ ।
ತಸ್ಮಾದ್ವಿಮುಕ್ತಿಮನ್ವಿಷ್ಯನ್ ದ್ವಿತೀಯಂ ನ ಸಮಾಚರೇತ್ ॥ XI 233

ತಿಳಿದೋ ತಿಳಿಯದೆಯೊ ಒಮ್ಮೆ ಧರ್ಮ ಬಾಹಿರವಾದ ಕೃತ್ಯವನ್ನು ಎಸಗಿದವನು ಆ ಪಾಪದಿಂದ ಬಿಡುಗಡೆ ಬಯಸುವುದಾದಲ್ಲಿ ಅಂತಹ ತಪ್ಪು ಮತ್ತೆಂದೂ ತನ್ನಿಂದ ಘಟಿಸದಂತೆ ಎಚ್ಚರವನ್ನು ವಹಿಸಬೇಕು.

## ತಪಃ ಪ್ರಶಂಸೆ

279. ತಪೋಮೂಲಮಿದಂ ಸರ್ವಂ ದೈವಮಾನುಷಕಂ ಸುಖಮ್ ।
ತಪೋಮಧ್ಯಂ ಬುಧೈಃ ಪ್ರೋಕ್ತಂ ತಪೋಽಂತಂ ವೇದದರ್ಶಿಭಿಃ ॥ -XI 235

ದೇವತೆಗಳ ಮತ್ತು ಮನುಷ್ಯರ ಎಲ್ಲ ರೀತಿಯ ಸುಖಕ್ಕೂ ತಪಸ್ಸೇ ಮುಖ್ಯವಾದ ಆಶ್ರಯ. ದೈವಿಕ ಹಾಗೂ ಮಾನಸಿಕ ಸುಖದ ಆದ್ಯಂತ ಮತ್ತು ಮಧ್ಯವೂ ಸಹ ತಪಸ್ಸನ್ನೇ ಅವಲಂಬಿಸಿವೆ ಎಂದು ವೇದದ್ರಷ್ಟಾರರು ತಿಳಿಸಿರುವರು.

280. ಋಷಯಃ ಸಂಯತಾತ್ಮಾನಃ ಫಲಮೂಲಾನಿಲಾಶಿನಃ ।
ತಪಸೈವ ಪ್ರಪಶ್ಯಂತಿ ತ್ರೈಲೋಕ್ಯಂ ಸಚರಾಚರಮ್ ॥ XI 237

ಮನೋನಿಗ್ರಹವನ್ನು ಹೊಂದಿದವರೂ, ಗಡ್ಡೆ ಗೆಣಸು ಹಾಗೂ ಗಾಳಿಗಳ ಮೇಲೆಯೇ ಜೀವಿಸುವವರೂ ಆದ ಋಷಿಗಳು ಚರಾಚರಾತ್ಮಕವಾದ ಮೂರು ಲೋಕಗಳನ್ನು ಸಹ ತಪಸ್ಸಿನಿಂದಲೇ ಪ್ರತ್ಯಕ್ಷವಾಗಿ ಕಾಣುತ್ತಾರೆ.

281 ಔಷಧಾನ್ಯಗದೋ ವಿದ್ಯಾ ದೈವೀ ಚ ವಿವಿಧಾ ಸ್ಥಿತಿಃ ।
ತಪಸೈವ ಪ್ರಸಿದ್ಧ್ಯಂತಿ ತಪಸ್ತೇಷಾಂ ಹಿ ಸಾಧನಮ್ ॥ -XI 238

ಔಷಧಿಗಳು, ಆರೋಗ್ಯ, ವಿದ್ಯೆ ಮತ್ತು ವಿವಿಧ ರೀತಿಯ ದೈವಗತಿ, ಇವೆಲ್ಲ ತಪಸ್ಸಿನಿಂದಲೇ ಸಿದ್ಧಿಸುತ್ತವೆ. ಇವಕ್ಕೆಲ್ಲಾ ತಪಸ್ಸೇ ಮುಖ್ಯ ಸಾಧನ.

282. ಯದ್ದುಸ್ತರಂ ಯದ್ದುರಾಪಂ ಯದ್ದುರ್ಗಂ ಯಚ್ಚ ದುಷ್ಕರಮ್ ।
ಸರ್ವಂ ತು ತಪಸಾ ಸಾಧ್ಯಂ ತಪೋ ಹಿ ದುರತಿಕ್ರಮಮ್ ॥ XI 239

ದಾಟಲಾಗದ, ಹೊಂದಲಾಗದ, ಸೇರಲಾಗದ, ಮಾಡಲಾಗದ ಎಲ್ಲ ಕಾರ್ಯಗಳು ಸಹ ತಪಸ್ಸಿನಿಂದ ಸಾಧ್ಯವಾಗುತ್ತವೆ, ತಪಸ್ಸನ್ನು ಮೀರಿಸುವ ಮತ್ತೊಂದು ಸಾಧನವೇ ಇಲ್ಲ

283 ಯತ್ಕಿಂಚಿದೇನಃ ಕುರ್ವಂತಿ ಮನೋವಾಂಙ್ಮೂರ್ತಿಭಿರ್ಜನಾಃ ।
ತತ್ಸರ್ವಂ ನಿರ್ದಹಂತ್ಯಾಶು ತಪಸ್ಯೈವ ತಪೋಧನಾಃ ॥ -XI 242

ಜನರು ತಮ್ಮ ಮನಸ್ಸು, ಮಾತು ಮತ್ತು ಶರೀರಗಳಿಂದ ಮಾಡುವ ಎಲ್ಲ ರೀತಿಯ ಪಾಪಗಳನ್ನು ಸಹ ತಪೋಧನರು ತಮ್ಮ ತಪಸ್ಸಿನಿಂದ ತತ್‌ಕ್ಷಣವೇ ಭಸ್ಮ ಮಾಡಿಬಿಡುತ್ತಾರೆ.

## ಕೆಲವು ಮುಖ್ಯ ಪಾಪನಾಶಕಗಳು

284 ವೇದಾಭ್ಯಾಸೋಽನ್ವಹಂ ಶಕ್ತ್ಯಾ ಮಹಾಯಜ್ಞಕ್ರಿಯಾ ಕ್ಷಮಾ ।
[1]ನಾಶಯತ್ಯಾಶು ಪಾಪಾನಿ ಮಹಾಪಾತಕಜಾನ್ಯಪಿ ॥ -XI 246

ಪ್ರತಿದಿನವೂ ಯಥಾಶಕ್ತಿ ವೇದಾಧ್ಯಯನ, ಮಹಾಯಜ್ಞವೊದಲಾದ ಸತ್ಕಾರ್ಯಗಳು ಮತ್ತು ಕ್ಷಮೆ ಇವು ಮಹಾಪಾತಕಗಳಿಂದುಂಟಾಗುವ ಹಿರಿಯ ಪಾಪಗಳನ್ನೆಲ್ಲ ನಾಶಮಾಡುತ್ತವೆ.

## ಜ್ಞಾನವೇ ಪ್ರಧಾನವಾದ ಪಾಪನಾಶಕ ವಸ್ತು

285. ಯಥೈಧಸ್ತೇಜಸಾ ವಹ್ನಿಃ ಪ್ರಾಪ್ತಂ ನಿರ್ದಹತಿ ಕ್ಷಣಾತ್ ।
ತಥಾ ಜ್ಞಾನಾಗ್ನಿನಾ ಪಾಪಂ ಸರ್ವಂ ದಹತಿ ವೇದವಿತ್ ॥ -XI 247

---

[1] ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥
- ಗೀತಾ (4/37)

ಬೆಂಕಿಯು ತನ್ನ ತೇಜಸ್ಸಿನಿಂದ ತನ್ನಲ್ಲಿ ಹಾಕಲ್ಪಟ್ಟ ಎಲ್ಲ ಕಟ್ಟಿಗೆಗಳನ್ನು ಕ್ಷಣಮಾತ್ರದಲ್ಲಿ ಸುಟ್ಟು ಬಿಡುವಂತೆ, ವೇದವನ್ನು ಅರ್ಥ ಮಾಡಿಕೊಂಡವನು ತನ್ನ ಜ್ಞಾನವೆಂಬ ಬೆಂಕಿಯಿಂದ ಎಲ್ಲ ಪಾಪಗಳನ್ನು ಸುಟ್ಟು ಹಾಕುತ್ತಾನೆ.

## ಪುರುಷಾರ್ಥ ಸಂಪಾದನೆಯ ರೀತಿ

286 ಅಲಬ್ಧಂ ಚೈವ ಲಿಪ್ಸೇತ ಲಬ್ಧಂ ರಕ್ಷೇತ್ ಪ್ರಯತ್ನತಃ ।
ರಕ್ಷಿತಂ ವರ್ಧಯೇಚ್ಚೈವ ವೃದ್ಧಂ ಪಾತ್ರೇಷು ನಿಕ್ಷಿಪೇತ್ ॥ -VII 99

ತನ್ನಲ್ಲಿ ಇಲ್ಲದ್ದನ್ನು ಯೋಗ್ಯ ರೀತಿಯಲ್ಲಿ ಸಂಪಾದಿಸಿಕೊಳ್ಳಲು ಯತ್ನಿಸಬೇಕು ಸಂಪಾದಿಸಿದ್ದನ್ನು ನಷ್ಟವಾಗದಂತೆ ಸರ್ವ ವಿಧದಿಂದಲೂ ರಕ್ಷಿಸಿಕೊಳ್ಳಬೇಕು ಹಾಗೆ ರಕ್ಷಿಸಿದ್ದನ್ನು ವೃದ್ಧಿಗೊಳಿಸಬೇಕು. ವೃದ್ಧಿಸಿದ್ದನ್ನು ಸತ್ಪಾತ್ರರಲ್ಲಿ ಸಮರ್ಪಿಸುವ ಮೂಲಕ ಉಳಿಸಿಕೊಳ್ಳಬೇಕು.

287 ಏತಚ್ಚತುರ್ವಿಧಂ ವಿದ್ಯಾತ್ ಪುರುಷಾರ್ಥಪ್ರಯೋಜಕಮ್ ।
ಅಸ್ಯ ನಿತ್ಯಮನುಷ್ಠಾನಂ ಸಮ್ಯಕ್ ಕುರ್ಯಾದತಂದ್ರಿತಃ ॥ -VII 100

ಪುರುಷಾರ್ಥಗಳನ್ನು ಸಂಪಾದಿಸುವ ದಾರಿಯು ಹೀಗೆ ನಾಲ್ಕು ತೆರನಾಗಿದೆ ಇದರ ಅನುಷ್ಠಾನವನ್ನು ನಿತ್ಯದಲ್ಲೂ ಆಲಸ್ಯವಿಲ್ಲದೆ ಮಾಡುತ್ತಿರಬೇಕು.

## ಕೆಲವು ಶ್ರೇಯಃಸಾಧನಗಳು

288 ಯಸ್ಮಾದಣ್ವಪಿ ಭೂತಾನಾಂ ದ್ವಿಜಾನ್ನೋತ್ಪದ್ಯತೇ ಭಯಮ್ ।
ತಸ್ಯ ದೇಹಾದ್ವಿಮುಕ್ತಸ್ಯ ಭಯಂ ನಾಸ್ತಿ ಕುತಶ್ಚನ ॥ -VI 40

ಪ್ರಾಣಿಗಳಿಗೆ ಸ್ವಲ್ಪ ಮಾತ್ರ ಭಯವೂ ನಹ ಯಾರಿಂದ ಉಂಟಾಗುವುದಿಲ್ಲವೋ, ಅಂತಹವನಿಗೆ ಮರಣಾನಂತರವೂ ಸಹ ಯಾವ ಭಯವೂ ಉಂಟಾಗದು.

---

2 ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚಯಃ ।
ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥
-ಗೀತಾ (12/15)

289 ಅತಿವಾದಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ ।

ನ ಚೇಮಂ ದೇಹಮಾಶ್ರಿತ್ಯ ವೈರಂ ಕುರ್ವೀತ ಕೇನಚಿತ್ ॥ -VI 47

ಇತರರ ಕ್ರೂರ ಮಾತುಗಳನ್ನು ಸಹಿಸಿಕೊಳ್ಳಬೇಕು ಯಾರನ್ನೂ ಅವಮಾನಪಡಿಸಕೂಡದು ಅನಿತ್ಯವಾದ ಈ ದೇಹವನ್ನು ಆಶ್ರಯಿಸಿ, ಯಾರ ಮೇಲೂ ವೈರ ಸಾಧಿಸಲು ಹೊರಡಬಾರದು

290 ಕ್ರುಧ್ಯಂತಂ ನ ಪ್ರತಿಕುಧ್ಯೇದಾಕ್ರುಷ್ಟಃ ಕುಶಲಂ ವದೇತ್ ।

ಸಪ್ತದ್ವಾರಾವಕೀರ್ಣಾಂ ಚ ನ ವಾಚಮನೃತಾಂ ವದೇತ್ ॥ -VI 48

ಕೋಪಗೊಳ್ಳುವವನ ಮೇಲೆ ಪ್ರತಿಯಾಗಿ ಕೋಪಗೊಳ್ಳಬಾರದು. ಕೆಣಕಲ್ಪಟ್ಟರೂ ಕುಶಲವನ್ನೇ ನುಡಿಯಬೇಕು ಸುಳ್ಳು ಮಾತನ್ನು ಮಾತ್ರ ಎಂದಿಗೂ ಆಡಬಾರದು.

291. ಸ್ವಾಧ್ಯಾಯೇ ನಿತ್ಯಯುಕ್ತಃ ಸ್ಯಾದ್ದಾಂತೋ ಮೈತ್ರಃ ಸಮಾಹಿತಃ ।

ದಾತಾ ನಿತ್ಯಮನಾದಾತಾ ಸರ್ವಭೂತಾನುಕಂಪಕಃ ॥ -VI 8

ಯಾವಾಗಲೂ ಸ್ವಾಧ್ಯಾಯದಲ್ಲಿ ನಿರತನೂ, ಜಿತೇಂದ್ರಿಯನೂ, ಶಾಂತನೂ, ಸ್ನೇಹಶೀಲನೂ, ದಾನಶೀಲನೂ, ಸರ್ವಪ್ರಾಣಿಗಳಲ್ಲೂ ಕೃಪಾಳುವೂ ಆಗಿ ಇರಬೇಕು , ಯೋಗ್ಯವಲ್ಲದ ದಾನವನ್ನು ಎಂದೂ ಸ್ವೀಕರಿಸಕೂಡದು.

292 ದೃಢಕಾರೀ ಮೃದುರ್ದಾಂತಃ ಕ್ರೂರಾಚಾರೈರಸಂವಸನ್ ।

ಅಹಿಂಸ್ರೋ ದಮದಾನಾಭ್ಯಾಂ ಜಯೇತ್ಸ್ವರ್ಗಂ ತಥಾವ್ರತಃ ॥ -VI 246

ದೃಢಬುದ್ಧಿಯಿಂದ ಕಾರ್ಯಗಳನ್ನು ಕೈಗೊಳ್ಳುವವನೂ, ಮೃದು ಸ್ವಭಾವದವನೂ ಆಗಿದ್ದು ಹಿಂಸೆಯನ್ನು ಕೈಬಿಟ್ಟು ಕ್ರೂರಾಚಾರಿಗಳ ಸಹವಾಸವನ್ನು ತೊರೆದು ನಿಯಮಶೀಲನೂ, ಜಿತೇಂದ್ರಿಯನೂ, ದಾನಶೀಲನೂ ಆಗಿರುವವನು ಸ್ವರ್ಗವನ್ನು ಪಡೆದುಕೊಳ್ಳುತ್ತಾನೆ

293 ಸತ್ಯಧರ್ಮಾರ್ಯವೃತ್ತೇಷು ಶೌಚೇ ಚೈವಾರಮೇತ್ ಸದಾ ।
ಶಿಷ್ಯಾಂಶ್ಚ ಶಿಷ್ಯಾದ್ಧರ್ಮೇಣ ವಾಗ್ಬಾಹೂದರಸಂಯತಃ ॥ -IV 175

ಸತ್ಯ, ಧರ್ಮ ಮೊದಲಾದ ಸಜ್ಜನರ ನಡವಳಿಕೆಗಳಲ್ಲೂ, ಪರಿಶುದ್ಧ ಆಚರಣೆಯಲ್ಲಿಯೂ ಸದಾ ಮಗ್ನನಾಗಿರಬೇಕು ಮಾತು, ತೋಳು ಹಾಗೂ ಉದರಗಳ ಮೇಲೆ ಹತೋಟಿಯನ್ನಿರಿಸಿಕೊಂಡು ಶಿಷ್ಯರಿಗೆ ನ್ಯಾಯವಾದ ರೀತಿಯಲ್ಲಿ ಧರ್ಮವನ್ನು ತಿಳಿಸಿಕೊಡಬೇಕು.

294 ಅಹಿಂಸಯೇಂದ್ರಿಯಾಸಂಗೈರ್ವೈದಿಕೈಶ್ಚೈವ ಕರ್ಮಭಿಃ ।
ತಪಸಶ್ಚರಣೈಶ್ಚೋಗ್ರೈಸ್ಸಾಧಯಂತೀಹ ತತ್ಪದಮ್ ॥ -VI 75

ಅಹಿಂಸೆ, ಇಂದ್ರಿಯನಿಗ್ರಹ, ವೇದೋಕ್ತ ಸ್ವಕರ್ಮಾಚರಣೆ ಮತ್ತು ಕಠಿಣತಪೋಽನುಷ್ಠಾನ ಇವುಗಳ ಮೂಲಕ ಮೋಕ್ಷಪ್ರಾಪ್ತಿ ಸಾಧ್ಯವಾಗುತ್ತದೆ.

295 ವೇದಾಭ್ಯಾಸಸ್ತಪೋ ಜ್ಞಾನಮಿಂದ್ರಿಯಾಣಾಂ ಚ ಸಂಯಮಃ ।
ಅಹಿಂಸಾ ಗುರುಸೇವಾ ಚ ನಿಃಶ್ರೇಯಸಕರಂ ಪರಮ್ ॥ -XII 83

ವೇದಾಭ್ಯಾಸ, ತಪಸ್ಸು, ಜ್ಞಾನ, ಇಂದ್ರಿಯನಿಗ್ರಹ, ಅಹಿಂಸೆ ಮತ್ತು ಗುರುಸೇವೆ, ಇವೆಲ್ಲವೂ ಶ್ರೇಷ್ಠಸುಖಕ್ಕೆ ಸಾಧನಗಳು.

296. ಯೋ ಬಂಧನವಧಕ್ಲೇಶಾನ್ ಪ್ರಾಣಿನಾಂ ನ ಚಿಕೀರ್ಷತಿ ।
ನ ಸರ್ವಸ್ಯ ಹಿತಪ್ರೇಪ್ಸುಃ ಸುಖಮಂತ್ಯಂತಮಶ್ನುತೇ ॥ -V 46

ಪ್ರಾಣಿಗಳಿಗೆ ಬಂಧನ, ವಧೆ ಮೊದಲಾದ ಕ್ಲೇಶಗಳನ್ನು ಉಂಟುಮಾಡಲು ಯಾವನು ಸರ್ವಥಾ ಬಯಸುವುದಿಲ್ಲವೋ, ಅವನು ಎಲ್ಲರಿಗೂ ಹಿತವನ್ನು ಬಯಸುವವನು[1] ಎನ್ನಿಸುತ್ತಾನೆ, ಮತ್ತು ಅನಂತ ಸುಖಕ್ಕೆ ಭಾಗಿಯಾಗುತ್ತಾನೆ.

---

1 ನ ಶಿಷ್ಯಾನನುಬಧ್ನೀತ (ಭಾಗವತ 7/14/8)
ನ ವೃಥಾ ಶಿಷ್ಯಬಂಧಕೃತ್ । (ಭಾಗವತ ತಾತ್ಪರ್ಯ 7/14/8)

2 ನಿರ್ಮಾನಮೋಹಾ ಜಿತಸಂಗದೋಷಾ
ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।
ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-
ರ್ಗಚ್ಛಂತ್ಯಮೂಢಾ ಪದಮವ್ಯಯಂ ತತ್ ॥ - ಗೀತಾ (15/5)

297 ಮಂಗಲಾಚಾರಯುಕ್ತಾನಾಂ ನಿತ್ಯಂ ಚ ಪ್ರಯತಾತ್ಮನಾಮ್ ।
ಜಪತಾಂ ಜುಹ್ವತಾಂ ಚೈವ ವಿನಿಪಾತೋ ನ ವಿದ್ಯತೇ ॥ IV 146

ಮಂಗಲಕರವಾದ ಆಚಾರ, ಮನಸ್ಸು ಮೊದಲಾದ ಇಂದ್ರಿಯಗಳ ಮೇಲೆ ಹತೋಟಿ, ನಿತ್ಯದಲ್ಲೂ ಜಪ, ಹೋಮಗಳ ಆಚರಣೆ ಇವುಗಳನ್ನು ಹೊಂದಿರುವವರಿಗೆ ಎಂದೂ ಕೇಡು ಸಂಭವಿಸಲಾರದು

298. ಅಧ್ಯಾತ್ಮರತಿರಾಸೀನೋ ನಿರಪೇಕ್ಷೋ ನಿರಾಮಿಷಃ ।
ಆತ್ಮನೈವ ಸಹಾಯೇನ ಸುಖಾರ್ಥೀ ವಿಚರೇದಿಹ ॥ -VI 49

ಸುಖವನ್ನು ಬಯಸುವವನು ಪರಮಾತ್ಮನಲ್ಲಿಯೇ ಮನಸ್ಸನ್ನಿರಿಸಿದವನಾಗಿ, ಆಸನಾರೂಢನಾಗಿ, ಕಾಮ್ಯಫಲಗಳಲ್ಲಿ ಅಭಿಲಾಷೆಯನ್ನು ಹೊಂದದೇ[2], ಯಾವ ಪ್ರಲೋಭನೆಗೂ ಒಳಗಾಗದೇ, ಪರಮಾತ್ಮನ ಸಹಾಯ ಒಂದನ್ನೇ ಆಸರೆಯನ್ನಾಗಿರಿಸಿಕೊಂಡವನಾಗಿ ನಿರ್ಭೀತಿಯಿಂದ ಬದುಕಬೇಕು

299 ಅಲಾಭೇ ನ ವಿಷಾದೀ ಸ್ಯಾತ್ ಲಾಭೇ ಚೈವ ನ ಹರ್ಷಯೇತ್[3] ।
ಪ್ರಾಣಯಾತ್ರಿಕಮಾತ್ರಃ ಸ್ಯಾನ್ಮಾತ್ರಾಸಂಗಾದ್ವಿನಿರ್ಗತಃ ॥ -VI 57

ಬಯಸಿದ ವಸ್ತುವು ದೊರೆಯದಿದ್ದಾಗ ವ್ಯಸನಪಡಬಾರದು. ದೊರೆತಾಗ ಅತಿಯಾಗಿ ಹರ್ಷವನ್ನೂ ಪಡಕೂಡದು. ವಿಷಯಗಳ ಸಂಪರ್ಕವನ್ನು ಸಾಧ್ಯವಿದ್ದಷ್ಟೂ ಕಡಿದುಕೊಳ್ಳಬೇಕು ಪ್ರಾಣಧಾರಣೆಗೆ ಅವಶ್ಯವೆನ್ನಿಸುವಷ್ಟೇ ಲೋಕಸಂಪರ್ಕವನ್ನು ಹೊಂದಿ ಜೀವಿಸಬೇಕು.

300 ಇಂದ್ರಿಯಾಣಾಂ ನಿರೋಧೇನ ರಾಗದ್ವೇಷಕ್ಷಯೇನ ಚ ।
ಅಹಿಂಸಯಾ ಚ ಭೂತಾನಾಮಮೃತತ್ವಾಯ ಕಲ್ಪತೇ ॥ -VI 60

---

1 ಮಾ ಹಿಂಸ್ಯಾತ್ ಸರ್ವಾ ಭೂತಾನಿ (ಶ್ರುತಿಃ)

2 ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಮ್ ॥ (ಈಶಾವಾಸ್ಯ)

3 ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಂ
-ಗೀತಾ (5/20)

ಇಂದ್ರಿಯನಿಗ್ರಹ, ರಾಗದ್ವೇಷಗಳ ನಾಶ ಮತ್ತು ಪ್ರಾಣಿಗಳನ್ನು ಹಿಂಸಿಸದಿರುವಿಕೆ ಇವುಗಳಿಂದ ಮುಕ್ತಿಯು ಸಾಧ್ಯವಾಗುತ್ತದೆ [1]

301 [2]ಉತ್ತಮೈರುತ್ತಮೈರ್ನಿತ್ಯಂ ಸಂಬಂಧಾನಾಚರೇತ್ ಸಹ ।
ನಿನೀಷುಃ ಕುಲಮುತ್ಕರ್ಷಮಧಮಾನಧಮಾಂಸ್ತ್ಯಜೇತ್ ॥ -IV 244

ಕುಲದ ಏಳಿಗೆಯನ್ನು ಬಯಸುವವನು ಯಾವಾಗಲೂ ಉತ್ತಮವಾದವರೊಂದಿಗೇ ಸಂಬಂಧವನ್ನು ಬೆಳೆಸಬೇಕು, ಕೀಳು ಜನಗಳ ಸಹವಾಸವನ್ನು ಸಾಧ್ಯವಿದ್ದಷ್ಟೂ ತೊರೆಯಬೇಕು

302 [3]ಏಕಾಕೀ ಚಿಂತಯೇನ್ನಿತ್ಯಂ ವಿವಿಕ್ತೇ ಹಿತಮಾತ್ಮನಃ ।
ಏಕಾಕೀ ಚಿಂತಯಾನೋ ಹಿ ಪರಂ ಶ್ರೇಯೋಽಧಿಗಚ್ಛತಿ ॥ -IV 258

ನಿತ್ಯದಲ್ಲೂ ನಿರ್ಜನಪ್ರದೇಶದಲ್ಲಿದ್ದು ಏಕಾಂತದಲ್ಲಿ ತನ್ನ ಹಿತವನ್ನು ಆಲೋಚಿಸುತ್ತಿರಬೇಕು. ಆ ರೀತಿಯ ಏಕಾಂತಚಿಂತನೆಯಿಂದ ಹಿರಿಯ ಶ್ರೇಯಸ್ಸು ಲಭಿಸುತ್ತದೆ.

## ಕರ್ಮ ವಿಭಾಗ

303 ಶುಭಾಶುಭಫಲಂ ಕರ್ಮ ಮನೋವಾಗ್ದೇಹಸಂಭವಮ್ ।
ಕರ್ಮಜಾ ಗತಯೋ ನೃಣಾಮುತ್ತಮಾಧಮಮಧ್ಯಮಾಃ ॥ -XII 3

ಶುಭಾಶುಭಫಲಗಳನ್ನು ಕೊಡುವ ಎಲ್ಲಾ ಕರ್ಮವೂ ಮನಸ್ಸು, ಮಾತು ಮತ್ತು ದೇಹ ಈ ಮೂರರಿಂದ ಹುಟ್ಟುತ್ತದೆ ಮನುಷ್ಯರ ಕರ್ಮದಿಂದ ಉದ್ಭವಿಸುವ ಫಲಗಳು ಉತ್ತಮ, ಮಧ್ಯಮ ಮತ್ತು ಅಧಮ ಎಂಬುದಾಗಿ ಮೂರು ವಿಧವಾಗಿವೆ.

---

1 ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।
ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥
- ಗೀತಾ 2/15)

2 ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಃ
ತಮೋದ್ವಾರಂ ಯೋಷಿತಾಂ ಸಂಗಿಸಂಗಮ್ ॥ - ಭಾಗವತ (5/5/2)

3 ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ । - ಗೀತಾ (6/10)

## ಪೂರ್ವಜನ್ಮ ಸ್ಮರಣೆಯ ಉಪಾಯ

304 ವೇದಾಭ್ಯಾಸೇನ ಸತತಂ ಶೌಚೇನ ತಪಸ್ಯೈವ ಚ ।
ಅದ್ರೋಹೇಣ ಚ ಭೂತಾನಾಂ ಜಾತಿಂ ಸ್ಮರತಿ ಪೌರ್ವಿಕೀಮ್ ॥ -VI 148

ಸತತ ವೇದಾದಿಸಚ್ಛಾಸ್ತ್ರಗಳ ಅಭ್ಯಾಸ, ಅಂತರಂಗ ಶುದ್ಧಿ ಮತ್ತು ಬಹಿರಂಗ ಶುದ್ಧಿ ಎಂಬ ಉಭಯವಿಧ ನೈರ್ಮಲ್ಯ, ತಪಸ್ಸು ಮತ್ತು ಯಾವುದೇ ಪ್ರಾಣಿಗಳಿಗೂ ದ್ರೋಹ ಮಾಡದಿರುವಿಕೆ ಇವೆಲ್ಲವುಗಳಿಂದ ಪುರುಷನು ತನ್ನ ಪೂರ್ವಜನ್ಮವನ್ನು ಸ್ಮರಿಸಿಕೊಳ್ಳಲು ಸಾಧ್ಯವಾಗುತ್ತದೆ

## ಪೂರ್ವಜನ್ಮ ಸ್ಮರಣೆಯ ಪ್ರಯೋಜನ

305 ಪೌರ್ವಿಕೀಂ ಸಂಸ್ಮರನ್ ಜಾತಿಂ ಬ್ರಹ್ಮೈವಾಭ್ಯಸತೇ ಪುನಃ* ।
ಬ್ರಹ್ಮಾಭ್ಯಾಸೇನ ಚಾಜಸ್ರಮನಂತಂ ಸುಖಮಶ್ನುತೇ ॥ -IV 149

ಹೀಗೆ ಪೂರ್ವಜನ್ಮದ ಸ್ಮರಣೆಯನ್ನು ಹೊಂದಿದವನು ಬ್ರಹ್ಮಚಿಂತನೆಯಲ್ಲೇ ಪುನಃ ಪುನಃ ನಿರತನಾಗುವನು; ಮತ್ತು ಅಂತಹ ಸತತ ಬ್ರಹ್ಮ ಚಿಂತನೆಯಿಂದ ಕೊನೆಗೆ ಅನಂತ ಸುಖ (ಮೋಕ್ಷ)ವನ್ನು ಪಡೆಯುವನು

---

ಏಕಸ್ತಪೋ ದ್ವಿರಧ್ಯಾಯೀ ತ್ರಿಭಿರ್ಗೀತಂ ಚತುಃಪಥಮ್ ।
ಸಪ್ತ ಪಂಚ ಕೃಷೀಣಾಂ ಚ ಸಂಗ್ರಾಮೋ ಬಹುಭಿರ್ಜನೈಃ ॥ (ಸುಭಾಷಿತ)

* ಶುಚೀನಾಂ ಶ್ರೀಮತಾ ಗೇಹೇ ಯೋಗಭ್ರಷ್ಟೋಽಭಿಜಾಯತೇ ।
ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ॥

ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ।
ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ॥

ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ।
ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ॥

-ಇತ್ಯಾದಿ ॥ ಗೀತಾ (6/41-44)

## ಮನಸ್ಸೇ ಮುಖ್ಯ ಪ್ರವರ್ತಕ[1]

306 ತಸ್ಯೇಹ ತ್ರಿವಿಧಸ್ಯಾಪಿ ತ್ರ್ಯಧಿಷ್ಠಾನಸ್ಯ ದೇಹಿನಃ ।
ದಶಲಕ್ಷಣಯುಕ್ತಸ್ಯ ಮನೋವಿದ್ಯಾತ್ಪ್ರವರ್ತಕಮ್ ॥ -XII 4

ಮೂರು ವಿಧವಾಗಿದ್ದು ಮೂರು ಅಧಿಷ್ಠಾನಗಳಿಂದ ಹುಟ್ಟುವ ಈ ಹತ್ತು ವಿಧವಾದ ಕರ್ಮಗಳಿಗೆಲ್ಲ ಮನಸ್ಸೇ ಮುಖ್ಯವಾದ ಪ್ರವರ್ತಕ

## ಮಾನಸಿಕ ದುಷ್ಕರ್ಮಗಳು

307 ಪರದ್ರವ್ಯೇಷ್ವಭಿಧ್ಯಾನಂ ಮನಸಾऽನಿಷ್ಟಚಿಂತನಮ್ ।
ವಿತಥಾಭಿನಿವೇಶಶ್ಚ ತ್ರಿವಿಧಂ ಕರ್ಮ ಮಾನಸಮ್ ॥ -XII 5

ಪರದ್ರವ್ಯಗಳನ್ನು ಅಪಹರಿಸುವ ಯೋಚನೆ, ಮನಸ್ಸಿನಲ್ಲಿ ಕೆಟ್ಟದ್ದನ್ನು ಚಿಂತಿಸುವುದು ಮತ್ತು ಸುಳ್ಳಿನಲ್ಲಿ ಆಸಕ್ತಿ ಈ ಮೂರೂ ಮಾನಸಿಕ ದುಷ್ಕರ್ಮಗಳು.

## ವಾಙ್ಮಯ ದುಷ್ಕರ್ಮಗಳು

308 ಪಾರುಷ್ಯಮನೃತಂ ಚೈವ ಪೈಶುನ್ಯಂ ಚಾಪಿ ಸರ್ವಶಃ ।
ಅಸಂಬದ್ಧಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಮ್ ॥ -XII 6

ವಾಙ್ಮಯದುಷ್ಕರ್ಮವು ಕಾಠಿಣ್ಯ, ಸುಳ್ಳು, ಚಾಡಿ ಹೇಳುವುದು ಮತ್ತು ಅಸಂಬದ್ಧವಾದ ಪ್ರಲಾಪ ಎಂಬುದಾಗಿ ನಾಲ್ಕು ವಿಧ

## ದೈಹಿಕ ದುಷ್ಕರ್ಮಗಳು

309 ಅದತ್ತಾನಾಮುಪಾದಾನಂ ಹಿಂಸಾ ಚೈವಾವಿಧಾನತಃ ।
ಪರದಾರೋಪಸೇವಾ ಚ ಶಾರೀರಂ ತ್ರಿವಿಧಂ ಸ್ಮೃತಮ್ ॥ -XII 7

---

1 ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।
- ವಿಷ್ಣುಪುರಾಣ (6/27/8)

ಕೊಡಲ್ಪಡದ ವಸ್ತುಗಳನ್ನುತೆಗೆದುಕೊಳ್ಳುವುದು, ಶಾಸ್ತ್ರೋಕ್ತವಲ್ಲದ ಹಿಂಸೆಗೆ ಕೈಹಾಕುವುದು ಮತ್ತು ಪರಸ್ತ್ರೀಗಮನ ಈ ಮೂರೂ ದೇಹದಿಂದ ಮಾಡಲ್ಪಡುವ ದುಷ್ಕರ್ಮಗಳು

## ಕರ್ಮಫಲಾನುಭವದ ರೀತಿ

310 ಮಾನಸಂ ಮನಸೈವಾಯಮುಪಭುಂಕ್ತೇ ಶುಭಾಶುಭಮ್
ವಾಚಾ ವಾಚಾ ಕೃತಂ ಕರ್ಮಂ ಕಾಯೇನೈವ ಚ ಕಾಯಿಕಮ್ -XII8

[2]ಮನಸ್ಸಿಗೆ ಸಂಬಂಧಿಸಿದ ಶುಭಾಶುಭಕರ್ಮಗಳ ಫಲವನ್ನು ಮನಸ್ಸಿನಿಂದಲೂ, ಮಾತಿಗೆ ಸಂಬಂಧಿಸಿದವುಗಳನ್ನು ಮಾತಿನ ಮೂಲಕವಾಗಿಯೂ, ಶರೀರಕ್ಕೆ ಸಂಬಂಧಿಸಿದುವುಗಳನ್ನು ಶರೀರದಿಂದಲೂ ಮನುಷ್ಯನು ಅನುಭವಿಸುತ್ತಾನೆ

## ಕರ್ಮಗಳ ಫಲ

311 ಶರೀರಜೈಃ ಕರ್ಮದೋಷೈರ್ಯಾತಿ ಸ್ಥಾವರತಾಂ ನರಃ ।
ವಾಚಿಕೈಃ ಪಕ್ಷಿಮೃಗತಾಂ ಮಾನಸೈರಂತ್ಯಜಾತಿತಾಮ್ -XII9

ಮನುಷ್ಯನು ಶಾರೀರಕವಾದ ಕರ್ಮದೋಷಗಳಿಂದ ವೃಕ್ಷಮೊದಲಾದ ಸ್ಥಾವರ ಶರೀರಗಳನ್ನು ಹೊಂದುತ್ತಾನೆ, ವಾಚಿಕವಾದ ದೋಷಗಳಿಂದ ಪಕ್ಷಿ, ಮೃಗಗಳಾಗಿ ಹುಟ್ಟುತ್ತಾನೆ. ಮಾನಸಿಕ ದುಷ್ಕರ್ಮಗಳಿಂದಾಗಿ ಕೀಳುಜಾತಿಗಳಲ್ಲಿ ಜನಿಸುತ್ತಾನೆ

## ತ್ರಿದಂಡಿ

312 ವಾಗ್ದಂಡೋಽಥ ಮನೋದಂಡಃ ಕಾಯದಂಡಸ್ತಥೈವ ಚ ।
ಯಸ್ಯೈತೇ ನಿಹಿತಾ ಬುದ್ಧೌ ತ್ರಿದಂಡೀತಿ ಸ ಉಚ್ಯತೇ।। -XII 10

ಮಾತು, ಮನಸ್ಸು ಮತ್ತು ಶರೀರ ಈ ಮೂರನ್ನೂ ಸಹ ಯಾವನು ತನ್ನ ಹತೋಟಿಯಲ್ಲಿ ಇಟ್ಟುಕೊಂಡಿರುತ್ತಾನೆಯೋ ಅಂತಹವನು ತ್ರಿದಂಡೀ ಎನ್ನಿಸುತ್ತಾನೆ

## ತ್ರಿದಂಡಿಗೆ ದೊರಕುವ ಫಲ

313 ತ್ರಿದಂಡಮೇತನ್ನಿಕ್ಷಿಪ್ಯ ಸರ್ವಭೂತೇಷು ಮಾನವಃ।
ಕಾಮಕ್ರೋಧೌ ತು ಸಂಯಮ್ಯ ತತಃ ಸಿದ್ಧಿಂ ನಿಯಚ್ಛತಿ॥ -XI 11

ಎಲ್ಲ ಪ್ರಾಣಿಗಳ ವಿಷಯದಲ್ಲೂ ಈ ರೀತಿಯ ತ್ರಿದಂಡವನ್ನು ಹೊಂದಿದ ಮಾನವನು, ಕಾಮಕ್ರೋಧಗಳನ್ನು ಗೆದ್ದವನಾಗಿ ಪುರುಷಾರ್ಥಸಿದ್ಧಿಯನ್ನು ಪಡೆದುಕೊಳ್ಳುತ್ತಾನೆ.

## ಗುಣತ್ರಯಗಳು ಮತ್ತು ಅವುಗಳ ಲಕ್ಷಣ

314 *ಸತ್ತ್ವಂ ಜ್ಞಾನಂ ತಮೋ ಜ್ಞಾನಂ ರಾಗದ್ವೇಷೌ ರಜಃ ಸ್ಮೃತಂ।
ಏತದ್ವ್ಯಾಪ್ತಿಮದೇತೇಷಾಂ ಸರ್ವಭೂತಾಶ್ರಿತಂ ವಪುಃ॥ -XII26

ಜ್ಞಾನವು ಸತ್ವಗುಣದ ಲಕ್ಷಣ, ಅಜ್ಞಾನ ತಮೋಗುಣದ ಲಕ್ಷಣ, ಕಾಮ ಕ್ರೋಧಗಳು ರಜೋಗುಣದ ಲಕ್ಷಣಗಳು. ಎಲ್ಲಾ ಪ್ರಾಣಿಗಳ ಶರೀರಗಳೂ ಸಹ ಈ ರೀತಿಯಾಗಿ ಈ ಮೂರು ಗುಣಗಳ ವ್ಯಾಪ್ತಿಗೆ ಒಳಪಟ್ಟಿವೆ.

315 ವೇದಾಭ್ಯಾಸಸ್ತಪೋ ಜ್ಞಾನಂ ಶೌಚಮಿಂದ್ರಿಯನಿಗ್ರಹಃ।
ಧರ್ಮಕ್ರಿಯಾऽऽತ್ಮಚಿಂತಾ ಚ ಸಾತ್ವಿಕಂ ಗುಣಲಕ್ಷಣಮ್॥ -XII31

ವೇದಾಭ್ಯಾಸ, ತಪಸ್ಸು, ಜ್ಞಾನ, ಶುಚಿತ್ವ, ಇಂದ್ರಿಯನಿಗ್ರಹ, ಧರ್ಮಕಾರ್ಯಗಳ ಆಚರಣೆ ಮತ್ತು ಪರಮಾತ್ಮ ಚಿಂತನೆ ಇವೆಲ್ಲ ಸಾತ್ವಿಕ ಗುಣದ ಲಕ್ಷಣಗಳು.

317 ಆರಂಭರುಚಿತಾऽಧೈರ್ಯಮಸತ್ಕಾರ್ಯಪರಿಗ್ರಹಃ।
ವಿಷಯೋಪಸೇವಾ ಚಾಜಸ್ರಂ ರಾಜಸಂ ಗುಣಲಕ್ಷಣಂ॥ -XII32

ಕಾರ್ಯಾರಂಭದಲ್ಲಿ ಮಾತ್ರವೇ ಆಸಕ್ತಿ, ಅಧೈರ್ಯ, ದುಷ್ಕಾರ್ಯಗಳಿಗೆ ಕೈಹಾಕುವುದು ಮತ್ತು ಸದಾ ವಿಷಯಲೋಲುಪತೆ ಇವು ರಾಜಸಗುಣದ ಕಾರ್ಯಗಳು.

---

* ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।
ಪ್ರಮಾದಮೋಹೌ ತಮಸೋ ಭವತೋऽಜ್ಞಾನಮೇವ ಚ ॥ (ಗೀತಾ141/7)

317 ಲೋಭಃಸ್ವಪ್ನೋऽಧೃತಿಃ ಕ್ರೌರ್ಯಂ ನಾಸ್ತಿಕ್ಯಂ ಭಿನ್ನವೃತ್ತಿತಾ ।
ಯಾಚಿಷ್ಣುತಾ ಪ್ರಮಾದಶ್ಚ ತಾಮಸಂ ಗುಣಲಕ್ಷಣಮ್॥ -XII 33

ಲೋಭ, ನಿದ್ರೆ, ಧೈರ್ಯದ ಅಭಾವ, ಕ್ರೂರತನ, ನಾಸ್ತಿಕ ಮನೋಭಾವ, ದುರ್ನಡತೆ, ಅಂಗಲಾಚುವಿಕೆ ಮತ್ತು ಪ್ರಮಾದ ಇವೆಲ್ಲ ತಾಮಸ ಗುಣದ ಕಾರ್ಯಗಳು.

## ಕರ್ಮ ತ್ರೈವಿಧ್ಯ

318. ಯತ್ಕರ್ಮ ಕೃತ್ವಾ ಕುರ್ವಂಶ್ಚ ಕರಿಷ್ಯಂಶ್ಚೈವ ಲಜ್ಜತಿ।
ತಜ್ಜ್ಞೇಯಂ ವಿದುಷಾ ಸರ್ವಂ ತಾಮಸಂ ಗುಣಲಕ್ಷಣಮ್॥ -XII 35

ಯಾವ ಕಾರ್ಯವನ್ನು ಮಾಡುತ್ತಿರುವಾಗ, ಮಾಡಿದ ಮೇಲೆ ಮತ್ತು ಮಾಡುವ ಮುನ್ನ ಮನಸ್ಸಿಗೆ ಲಜ್ಜೆ ಎನ್ನಿಸುವದೋ ಅಂತಹ ಕಾರ್ಯವು ತಾಮಸವೆನ್ನಿಸುತ್ತದೆ.

319 ಯೇನಾಸ್ಮಿನ್ ಕರ್ಮಣಾ ಲೋಕೇ ಖ್ಯಾತಿಮಿಚ್ಛತಿ ಪುಷ್ಕಲಾಂ।
ನ ಚ ಶೋಚತ್ಯಸಂಪತ್ತೌ ತದ್ವಿಜ್ಞೇಯಂ ತು ರಾಜಸಮ್॥ -XII 36

ಯಾವ ಕರ್ಮವು ಈ ಲೋಕದಲ್ಲಿ ವಿಪುಲವಾದ ಕೀರ್ತಿಯನ್ನುದ್ದೇಶಿಸಿ ಮಾಡಲ್ಪಡುವುದೋ, ಹಾಗಾಗದಿದ್ದಲ್ಲಿ ದುಃಖವೆನ್ನಿಸುತ್ತದೆಯೋ ಅದು ರಾಜಸಕರ್ಮ.

320. ಯತ್ಸರ್ವೇಣೇಚ್ಛತಿ ಜ್ಞಾತುಂ ಯನ್ನ ಲಜ್ಜತಿ ಚಾಚರನ್।
ಯೇನ ತುಷ್ಯತಿ ಚಾತ್ಮಾಽಸ್ಯ ತತ್ ಸತ್ತ್ವಗುಣಲಕ್ಷಣಮ್॥ -XII37

ಜ್ಞಾನದ ಬಗ್ಗೆ ಅಭಿಲಾಷೆಯನ್ನು ಹೆಚ್ಚಿಸುವ, ಆಚರಣೆಯ ಕಾಲಕ್ಕೆ ನಾಚಿಕೆಯನ್ನುಂಟುಮಾಡದ ಮತ್ತು ಮನಸ್ಸಿಗೆ ತೃಪ್ತಿಯನ್ನೊದಗಿಸುವ ಕರ್ಮವು ಸಾತ್ವಿಕ ಎನ್ನಿಸುತ್ತದೆ.

## ಗುಣತ್ರಯಗಳ ಸಂಕ್ಷೇಪ ಲಕ್ಷಣ[1]

321 ತಮಸೋ ಲಕ್ಷಣಂ ಕಾಮೋ ರಜಸಸ್ತ್ವರ್ಥ ಉಚ್ಯತೇ।
ಸತ್ತ್ವಸ್ಯ ಲಕ್ಷಣಂ ಧರ್ಮಃ ಶ್ರೈಷ್ಠ್ಯಮೇಷಾಂ ಯಥೋತ್ತರಮ್॥ -XII38

ದುರಾಸೆಯು ತಮೋಗುಣದ ಲಕ್ಷಣ, ಹಣವು ರಜೋಗುಣದ ಲಕ್ಷಣ ಮತ್ತು ಧರ್ಮವು ಸತ್ವಗುಣದ ಲಕ್ಷಣ. ಇವುಗಳಲ್ಲಿ ತಮೋಗುಣಕ್ಕಿಂತ ರಜೋಗುಣವೂ, ರಜೋಗುಣಕ್ಕಿಂತ ಸತ್ವಗುಣವೂ ಶ್ರೇಷ್ಠವಾದುದು.

## ಗುಣತ್ರಯಗಳ ಫಲ

322 ದೇವತ್ವಂ ತಾತ್ವಿಕಾ ಯಾಂತಿ ಮನುಷ್ಯತ್ವಂ ಚ ರಾಜಸಾಃ।
ತಿರ್ಯಕ್ತ್ವಂ ತಾಮಸಾ ನಿತ್ಯಮಿತ್ಯೇಷಾ ತ್ರಿವಿಧಾ ಗತಿಃ॥ XII40

ಯಾವಾಗಲೂ ಸಾತ್ವಿಕರು ದೇವತ್ವವನ್ನೂ, ರಾಜಸರು ಮನುಷ್ಯತ್ವವನ್ನೂ, ತಾಮಸರು ಪ್ರಾಣಿಜನ್ಮಗಳನ್ನೂ ತಪ್ಪದೆ ಹೊಂದುತ್ತಾರೆ. ಹೀಗೆ ಗುಣಗಳ ಫಲವು ಮೂರು ವಿಧವಾಗಿದೆ.

## ಮನೋಭಾವವೇ ಕರ್ಮಫಲಗಳಿಗೆ ಮೂಲ[2]

323 ಯಾದೃಶೇನ ತು ಭಾವೇನ ಯದ್ಯತ್ ಕರ್ಮ ನಿಷೇವತೇ।
ತಾದೃಶೇನ ಶರೀರೇಣ ತತ್ತತ್ ಫಲಮವಾಪ್ಯತೇ॥ -XII81

ಮನುಷ್ಯನು ಯಾವ ಯಾವ ಮನೋಭಾವದಿಂದ ಯಾವ ಯಾವ ಕಾರ್ಯಗಳನ್ನು ಮಾಡುವನೋ, ಅದಕ್ಕೆ ಉಚಿತವಾದ ಶರೀರಗಳೊಂದಿಗೆ ಆಯಾ ಕರ್ಮಗಳ ಫಲವನ್ನು ಅನುಭವಿಸುತ್ತಾನೆ

---

1 ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥

- ಗೀತಾ (14/9)

2 ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥

- ಗೀತಾ (14/18)

## ಮನಸ್ತೃಪ್ತಿ

324. ಯತ್ಕರ್ಮ ಕುರ್ವತೋಽಸ್ಯ ಸ್ಯಾತ್ಪರಿತೋಷೋಽಂತರಾತ್ಮನಃ।
ತತ್ತತ್ ಪ್ರಯತ್ನೇನ ಕುರ್ವೀತ ವಿಪರೀತಂ ತು ವರ್ಜಯೇತ್॥ IV61

ಮನಸ್ಸಿಗೆ ತೃಪ್ತಿಯನ್ನು ತಂದು ಕೊಡತಕ್ಕಂತಹ ಧರ್ಮವಿರೋಧಿಯಲ್ಲದ ಕಾರ್ಯಗಳನ್ನೆ ಎಲ್ಲ ಪ್ರಯತ್ನದಿಂದಲೂ ಆಚರಿಸಬೇಕು, ಹಾಗಲ್ಲದ ಎಲ್ಲ ಕಾರ್ಯಗಳನ್ನೂ ತ್ಯಜಿಸಬೇಕು.

## ಸಂತೋಷವೇ ಸುಖದ ಮೂಲ

325. ಸಂತೋಷಂ ಪರಮಾಸ್ಥಾಯ ಸುಖಾರ್ಥೀ ಸಂಯತೋ ಭವೇತ್।
ಸಂತೋಷಮೂಲಂ ಹಿ ಸುಖಂ ದುಃಖಮೂಲಂ ವಿಪರ್ಯಯಃ॥ -IV12

ಸುಖವನ್ನು ಬಯಸುವವನು ಹೆಚ್ಚಿನ ತೃಪ್ತಿಯನ್ನು ಹೊಂದಿ ನಿಯಮಶೀಲನಾಗಿರಬೇಕು. ತೃಪ್ತಿಯೇ ಸುಖದ ಮೂಲವು. ಅತೃಪ್ತಿಯು ದುಃಖದ ಮೂಲ.

## ಉತ್ತಮಬಾಳಿಗೆ ಯೋಗ್ಯ ತತ್ವಜ್ಞಾನವು ಆವಶ್ಯಕ

326. ಸಮ್ಯಗ್ದರ್ಶನಸಂಪನ್ನಃ ಕರ್ಮಭಿರ್ನ ನಿಬಧ್ಯತೇ ॥
ದರ್ಶನೇನ ವಿಹೀನಸ್ತು ಸಂಸಾರಂ ಪ್ರತಿಪದ್ಯತೇ ॥ -VI-74

ಯಥಾರ್ಥವಾದ ತತ್ತ್ವಜ್ಞಾನವನ್ನು ಹೊಂದಿರುವವನು ಕರ್ಮಬಂಧನಕ್ಕೆ ತುತ್ತಾಗುವುದಿಲ್ಲ. ಅಂತಹ ತತ್ತ್ವಜ್ಞಾನವನ್ನು ಹೊಂದಿರದವನು ಸಂಸಾರದಲ್ಲಿ ತೊಳಲುತ್ತಾನೆ.

## ಅಧ್ಯಾತ್ಮ ವಿದ್ಯೆಯ ಹಿರಿಮೆ

327 ಸರ್ವೇಷಾಮಪಿ ಚೈತೇಷಾಮಾತ್ಮಜ್ಞಾನಂ ಪರಂ ಸ್ಮೃತಮ್ ।
ತದ್ಧ್ಯಗ್ರ್ಯಂ ಸರ್ವವಿದ್ಯಾನಾಂ ಪ್ರಾಪ್ಯತೇ ಹ್ಯಮೃತಂ ತತಃ ॥ -XII 85

---

[1] ಮಿಥ್ಯಾಜ್ಞಾನೇನ ಚ ತಮೋ ಜ್ಞಾನೇನೈವ ಪರಂ ಪದಮ್ ॥

-ಅಣುಭಾಷ್ಯ

ಎಲ್ಲಾ ಜ್ಞಾನಗಳಿಗಿಂತಲೂ ಪರಮಾತ್ಮಜ್ಞಾನವೇ ಅತ್ಯಂತ ಹಿರಿದು ಎಂಬುದು ಜ್ಞಾನಿಗಳ ಮತ, ಎಲ್ಲ ವಿದ್ಯೆಗಳಲ್ಲೂ ಆಧ್ಯಾತ್ಮ ವಿದ್ಯೆಯೇ ಶ್ರೇಷ್ಠವಾದುದು. ಶಾಶ್ವತ ಸುಖವು ದೊರೆಯುವುದು ಅದರಿಂದಲೇ ಅಲ್ಲವೇ.

## ಆಧ್ಯಾತ್ಮದ ಸ್ವರೂಪ

328 [2]ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಸಮಂ ಪಶ್ಯನ್ನಾತ್ಮಯಾಜೀ ಸ್ವಾರಾಜ್ಯಮಧಿಗಚ್ಛತಿ ॥ -XII 91

ಎಲ್ಲಾ ಪ್ರಾಣಿಗಳೂ ಭಗವಂತನ ವಶದಲ್ಲಿವೆ ಎಂದೂ, ಭಗವಂತನು ಎಲ್ಲಾ ಪ್ರಾಣಿಗಳಲ್ಲೂ ಅಂತರ್ಯಾಮಿಯಾಗಿ ನಿಯಾಮಕನಾಗಿರುವನೆಂದೂ, ಸರಿಯಾದ ರೀತಿಯಲ್ಲಿ ತಿಳಿದು ಪರಮಾತ್ಮನನ್ನು ಆರಾಧಿಸುವವನೇ ಮೋಕ್ಷ ಸಾಮ್ರಾಜ್ಯವನ್ನು ಪಡೆದುಕೊಳ್ಳುತ್ತಾನೆ.

## ಅಧ್ಯಾತ್ಮವೇ ಅಧರ್ಮವನ್ನು ಗೆಲ್ಲುವ ಮುಖ್ಯ ಉಪಾಯ

329 [3]ಸರ್ವಮಾತ್ಮನಿ ಸಂಪಶ್ಯೇತ್ ಸಚ್ಚಾಸಚ್ಚ ಸಮಾಹಿತಃ ।
ಸರ್ವಂ ಹ್ಯಾತ್ಮನಿ ಸಂಪಶ್ಯನ್ನಾಧರ್ಮೇ ಕುರುತೇ ಮನಃ ॥ -XII 118

ಎಲ್ಲ ವ್ಯಕ್ತ ಮತ್ತು ಅವ್ಯಕ್ತ ಪದಾರ್ಥಗಳೂ ಪರಮಾತ್ಮನ ಅಧೀನವಾಗಿವೆ ಎಂದು ಶಾಂತ ಮನಸ್ಸಿನಿಂದ ತಿಳಿಯಬೇಕು ಹಾಗೆ ಎಲ್ಲವನ್ನೂ ಪರಮಾತ್ಮನ ವಶವೆಂದು ತಿಳಿಯುವವನು ಅಧರ್ಮಕಾರ್ಯಗಳಲ್ಲಿ ಎಂದೂ ಮನಸ್ಸನ್ನು ಹಾಕಲಾರನು.

---

1 ಅಧ್ಯಾತ್ಮವಿದ್ಯಾ ವಿದ್ಯಾನಾಮ್ - (ಗೀತಾ 10/32)
ವಿಜ್ಞೇಯಂ ಪರಮಂ ಬ್ರಹ್ಮ - (ಶ್ರುತಿಃ)
ಅಥಾತೋ ಬ್ರಹ್ಮಜಿಜ್ಞಾಸಾ (ಬ್ರಹ್ಮಸೂತ್ರ 1/1/1)

2 ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ - ಗೀತಾ 6/29)

3 ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ಗೀತಾ (6/30)

## ಬ್ರಹ್ಮಪ್ರಾಪ್ತಿಯೇ ಧರ್ಮದ ಅಂತಿಮ ಗುರಿ

330 *ಏವಂ ಯಃ ಸರ್ವಭೂತೇಷು ಪಶ್ಯತ್ಯಾತ್ಮಾನಮಾತ್ಮನಾ ।
ಸ ಸರ್ವಸಮತಾಮೇತ್ಯ ಬ್ರಹ್ಮಾಭ್ಯೇತಿ ಪರಂ ಪದಮ್ ॥ -XII 125

ಹೀಗೇ ಎಲ್ಲಾ ಪ್ರಾಣಿಗಳನ್ನೂ, ಮನಃಪೂರ್ವಕವಾಗಿ, ಪರಮಾತ್ಮನ ಅಧೀನವೆಂದು ತಿಳಿದುಕೊಳ್ಳುವವನು, ಎಲ್ಲ ವಸ್ತುಗಳನ್ನೂ ಪಕ್ಷಪಾತವಿಲ್ಲದೆ ಅವುಗಳ ಯೋಗ್ಯತೆಯಂತೆ ಕಾಣುತ್ತಾ, ಕೊನೆಗೆ ಪರಮಪದವಿಯಾದ ಪರಮಾತ್ಮನ ಸಾನ್ನಿಧ್ಯವನ್ನು ಸೇರುವನು

## ಮನುಸ್ಮೃತಿಯ ಅಧ್ಯಯನದ ಫಲ

331 ಇತ್ಯೇತನ್ಮಾನವಂ ಶಾಸ್ತ್ರಂ ಭೃಗುಪ್ರೋಕ್ತಂ ಪಠನ್ ದ್ವಿಜಃ ॥
ಭವತ್ಯಾಚಾರವಾನ್ ನಿತ್ಯಂ ಯಥೇಷ್ಟಾಂ ಪ್ರಾಪ್ನುಯಾದ್ಗತಿಮ್ ॥ -XII 126

ಭೃಗುಮುನಿಗಳಿಂದ ಹೇಳಲ್ಪಟ್ಟ ಈ ಮನುಧರ್ಮಶಾಸ್ತ್ರವನ್ನು ಪಠಿಸುವ ದ್ವಿಜನು ನಿತ್ಯವೂ ಸದಾಚಾರಶೀಲನಾಗುತ್ತಾನೆ, ತಾನು ಬಯಸುವ ಉತ್ತಮ ಗತಿಯನ್ನು ಸಹ ಪಡೆದುಕೊಳ್ಳುತ್ತಾನೆ.

ಸಮರ್ಪಿತಂ ಮಯೈಾ ಭವೇತ್ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥

---

* ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥

-ಗೀತಾ (6/31)